ಉಪನ್ಯಾಸ ಗ್ರಂಥಮಾಲೆ

೧೩

# ಸಾರ್ವಜನಿಕ ಆಡಳಿತ

ಪ್ರೊ. ಜಿ. ಎಸ್. ಹಾಲಪ್ಪ,
ಎಂ. ಎ. (ಕೋಲಂಬಿಯ)




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಗಸ್ಟ, ೧೯೬೯

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ (ದ್ವಿತೀಯ ಆವೃತ್ತಿ) –ಕೆ. ಕೃಷ್ಣಮೂರ್ತಿ
೨. ಮನೋರೋಗಗಳು (ತೃ.ಆ. ) –ಎಸ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲುತನ –ಎನ್. ಪಿ. ಪಾಟೀಲ
೪. ಗಾದೆಗಳು (ದ್ವಿ. ಆ. ) –ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿ ಪದ್ಧತಿ (ದ್ವಿ.ಆ.)–ವ್ಹಿ. ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ.ಆ.) –ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು(ದ್ವಿ.ಆ.)-ಎನ್.ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, )–ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ.ಆ.) –ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) –ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.)–ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (,,) –ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಆ.) –ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) –ಗೌರೀಶ ಕೈಕಿಣಿ
೧೫. ಮಹಾಕವಿ ಮಿಲ್ಟನ್ ( ,, ) –ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ(,,)–ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ (ದ್ವಿ. ಆ.) –ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ –ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ (ದ್ವಿ.ಆ.) –ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ. ಆ.) –ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜ ಕಾರ್ಯ(ದ್ವಿ.ಆ.)–ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ (,,)–ಎ. ಎಂ. ರಾಜಶೇಖರಯ್ಯ
೨೩. ಕನ್ನಡನಾಡಿನ ಶಾಸನಗಳು (ದ್ವಿ. ಆ.) –ಪಿ. ಬಿ. ದೇಸಾಯಿ
೨೪. ಕವೀಂದ್ರ ರವೀಂದ್ರರು ( ,, ) –ಎಸ್. ಎಸ್. ಮಾಳವಾಡ
೨೫. ನಾಗಾನಂದ ( ,, ) –ಎಚ್.ಪಿ. ಮಲ್ಲೇದೇವರು
೨೬. ಜೀವನದಲ್ಲಿ ನಗೆ ( ,, ) –ಎಂ. ಎಸ್. ಸುಂಕಾಪುರ
೨೭. ಬಸವಣ್ಣನವರ ಯೋಜನೆಗಳು ( ,, ) –ಬಿ. ಸಿ. ಜವಳಿ
೨೮. ೧೮೫೭ರ ಕ್ರಾಂತಿ ( ,, ) –ಸಿ. ವೀರಬಸಣ್ಣ
೨೯. ಕನ್ನಡ ಕಥಾಸೃಷ್ಟಿ (ದ್ವಿ. ಆ.) –ಬಿ. ಬಿ. ಮಹೀಶವಾಡಿ
೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ (ದ್ವಿ. ಆ.) –ಕೆ. ಕೃಷ್ಣಮೂರ್ತಿ
೩೧. ನೀರಾವರಿ ಬೇಸಾಯ –ಎಸ್. ಎ. ಹೊಸಮನಿ

ಉಪನ್ಯಾಸ ಗ್ರಂಥಮಾಲೆ

೧೩

# ಸಾರ್ವಜನಿಕ ಆಡಳಿತ

ಪ್ರೊ. ಜಿ. ಎಸ್. ಹಾಲಪ್ಪ,

ಎ. ಎ. (ಕೋಲಂಬಿಯ)




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಗಸ್ಟ, ೧೯೬೯

ಪ್ರಕಾಶಕರು :
**ಎಸ್. ಎಸ್. ಒಡೆಯರ,** ಎಂ. ಎ., ಎಲ್ಎಲ್. ಬಿ.
ರಜಿಸ್ಟ್ರಾರ್,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ ೧೯೫೮ (೨೦೦೦ ಪ್ರತಿಗಳು)
ದ್ವಿತೀಯ ಮುದ್ರಣ ೧೯೬೫ (೨೦೦೦ ಪ್ರತಿಗಳು)
ತೃತೀಯ ಮುದ್ರಣ ೧೯೬೯ (೫೦೦೦ ಪ್ರತಿಗಳು)



ಬೆಲೆ : ೨೫ ಪೈಸೆ

ಮುದ್ರಕರು :
ಸಂಗಮ ಮುದ್ರಣಾಲಯ,
ಸಾಧನಕೇರಿ, ಧಾರವಾಡ

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವುದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ಎಂಬತ್ತಾರು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ

ಧಾರವಾಡ-೩ ಕುಲಪತಿ

೧೦-೮-೧೯೬೯ ಕರ್ನಾಟಕ ವಿಶ್ವವಿದ್ಯಾಲಯ

# ಅರಿಕೆ

ಮುಧೋಳದಲ್ಲಿ ನಾನು ಕೊಟ್ಟ 'ವ್ಯಾಸಂಗ ವಿಸ್ತರಣ ಉಪನ್ಯಾಸ'ವೇ ಈಗ ಪುಸ್ತಕ ರೂಪದಲ್ಲಿ ಹೊರಬಂದಿದೆ.

ಸಾಮಾಜಿಕ ಶಾಸ್ತ್ರಗಳ ದೊಡ್ಡ ಸಂಸಾರದಲ್ಲಿ ಸಾರ್ವಜನಿಕ ಆಡಳಿತವು ಇನ್ನೂ ಹಸುಳೆ. ಕನ್ನಡದಲ್ಲಿ ಮೊಟ್ಟ ಮೊದಲ ಕೃತಿಯಾಗಿ ಇದು ಮಹಾಜನರ ಕೈ ಸೇರುತ್ತಿದೆ. ವಿದ್ಯಾರ್ಥಿಗಳಿಗೆ ದೀರ್ಘ ಕಾಲ ಈ ವಿಷಯವನ್ನು ಕುರಿತು ಪಾಠ ಹೇಳಿದ ಅನುಭವದಿಂದ ಈ ಬರೆಹಕ್ಕೆ ಪುಷ್ಟಿ ಮತ್ತು ದೃಷ್ಟಿ ದೊರಕಿವೆ ಎಂದು ನನ್ನ ಭಾವನೆ.

ಶ್ರೀಯುತ ಕಣವಿಯವರ ಒತ್ತಾಯವಿಲ್ಲದಿದ್ದರೆ ನಾನು ಮುಧೋಳಕ್ಕೆ ಹೋಗುತ್ತಿರಲಿಲ್ಲ ಮತ್ತು ಮುಧೋಳದ ಭಾಷಣವು ಕೃತಿಗಿಳಿಯುತ್ತಿರಲಿಲ್ಲ. ಈ ಕೃತಿ ರಚನೆಗೆ ಪ್ರೇರಕರಾದ ಅವರ ಪ್ರೋತ್ಸಾಹವನ್ನು ಇಲ್ಲಿ ಸ್ಮರಿಸದಿರಲಾರೆ. ಈ ಪುಸ್ತಕ ಪ್ರಕಟನೆಯ ಭಾರ ಹೊತ್ತ ವಿಶ್ವವಿದ್ಯಾಲಯದ ಅಧಿಕಾರ ವರ್ಗಕ್ಕೆ ನಾನು ಉಪಕೃತನಾಗಿದ್ದೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧–೮–೧೯೫೮

ಜಿ. ಎಸ್. ಹಾಲಪ್ಪ

# ವಿಷಯ ಸೂಚಿಕೆ

# ಸಾರ್ವಜನಿಕ ಆಡಳಿತ

---

## ೧. ಸಾರ್ವಜನಿಕ ಆಡಳಿತವೆಂದರೇನು ?

ಇಪ್ಪತ್ತನೆಯ ಶತಮಾನದಲ್ಲಿ ಸರಕಾರದ ಕಾರ್ಯ ಕ್ಷೇತ್ರವು ವಿಸ್ತಾರವಾಗುತ್ತಿದೆ. ಪ್ರಾಚೀನ ಕಾಲದಲ್ಲಿ ರಾಜನು ಮಂತ್ರಿಗಳ ಸಹಾಯದಿಂದ ಆಡಳಿತವನ್ನು ನಡೆಸುತ್ತಿದ್ದನು. ಅಂದು ರಾಜನೇ ಸರಕಾರ, ಎಂದರೆ, ಕಾನೂನುಗಳನ್ನು ವಿಧಿಸುವುದು, ನ್ಯಾಯಾಧೀಶನಾಗಿ ವ್ಯಾಜ್ಯಗಳನ್ನು ಬಗೆಹರಿಸುವುದು, ರಾಜ್ಯದಲ್ಲಿ ಶಾಂತಿ ನೆಮ್ಮದಿಗಳನ್ನು ಕಾಪಾಡುವುದು ಮೊದಲಾದ ಕರ್ತವ್ಯಗಳನ್ನು ಆತ ನಿರ್ವಹಿಸಬೇಕಾಗಿತ್ತು. “ ಅರಸು ಮೆಚ್ಚಿದರೆ ಅರ್ಧರಾಜ್ಯ, ” “ ಅರಸು ಮುನಿದಗೆ ನಾಡಿನೊಳಗಿರಬಾರದು ” ಎಂಬ ಹೇಳಿಕೆಗಳು ಅರ್ಥಗರ್ಭಿತವಾಗಿವೆ. ಹಿಂದಿನ ಕಾಲದಲ್ಲಿ ರಾಜ್ಯದಾಡಳಿತವು ಕೇವಲ ಖಾಸಗಿ ವ್ಯವಹಾರದಂತಿತ್ತು. (ರಾಜ್ಯದ ಬೊಕ್ಕಸವು ರಾಜನ ವೈಯಕ್ತಿಕ ಎಣಿಕೆಯ ಮನೆಯಾಗಿತ್ತು. ) ಹತ್ತೊಂಬತ್ತನೆಯ ಶತಮಾನದಿಂದ ರಾಜ್ಯದ ಆಡಳಿತವು

ಸಾರ್ವಜನಿಕ ಚಟುವಟಿಕೆಯಾಗಿ ಪರಿವರ್ತನೆಗೊಂಡಿದೆ. ಪ್ರಜೆಗಳ ಯೋಗಕ್ಷೇಮಕ್ಕಾಗಿ ನಾನಾ ರೀತಿಯಲ್ಲಿ ಸರಕಾರವು ಶ್ರಮಿಸುತ್ತಿದೆ. ಈಗ ೧೫೦ ವರ್ಷಗಳ ಹಿಂದೆ ಮನೆಯಲ್ಲಿ ಹಿರಿಯರೊಬ್ಬರು ತೀರಿಕೊಂಡಾಗ ಅಥವಾ ಚೊಚ್ಚಿಲ ಹೆರಿಗೆಯಾದಾಗ ದೂರದ ಊರಲ್ಲಿರುವ ನೆಂಟರಿಗೆ (ಬೀಗರಿಗೆ) ಸುದ್ದಿಯನ್ನು ಮುಟ್ಟಿಸುವುದು ಕಷ್ಟವಾಗಿತ್ತು. ಅಕಸ್ಮಾತ್ತಾಗಿ ಯಾರಾದರೂ ಹೋಗುವವರೊಡನೆ ಹೇಳಿ ಕಳುಹಿಸಬೇಕಾಗಿತ್ತು. ಸುದ್ದಿ ಮುಟ್ಟುವುದೆಂಬ ಭರವಸೆಯೂ ಇರಲಿಲ್ಲ; ಮುಟ್ಟಿದೆಯೇ ಎಂಬ ಅರಿವೂ ಇರಲಿಲ್ಲ. ಈಗ ಸರಕಾರದ ಅಂಚೆ ಮತ್ತು ತಂತಿ ಖಾತೆಯು ನಮ್ಮ ಸಂದೇಶವನ್ನು ಎಷ್ಟೋ ದೂರದಲ್ಲಿರುವವರಿಗೂ ಕೂಡ ಅಲ್ಪಾವಧಿಯಲ್ಲಿ ಮುಟ್ಟಿಸಬಲ್ಲದು. ಪೋಸ್ಟ್ ಮತ್ತು ಟೆಲಿಗ್ರಾಫ್ ಇಲಾಖೆಯು ಆಧುನಿಕ ಸರಕಾರಿ ಆಡಳಿತ ಬ್ರಹ್ಮಾಂಡದ ಒಂದು ಮುಖ್ಯ ಶಾಖೆ ಮಾತ್ರ. ಇದರಂತೆ ಸರಕಾರದಲ್ಲಿ ಅನೇಕ ದೊಡ್ಡ ಇಲಾಖೆಗಳಿವೆ. ಇವುಗಳ ಮೂಲಕ ಸರಕಾರವು ರಾಜ್ಯಭಾರ ಮಾಡುತ್ತಿದೆ.

## ಆಡಳಿತದ ಸರ್ವವ್ಯಾಪ್ತಿ

ಜೀವನವ ಯಾವ ಕ್ಷೇತ್ರವೇ ಆಗಲಿ ಅಲ್ಲಿ ಆಡಳಿತವು ಇದ್ದೇ ಇರಬೇಕು. ಆಡಳಿತ ಕೇವಲ ಸರಕಾರ ಒಂದರದೇ ಲಕ್ಷಣವಲ್ಲ. ನಾಗರಿಕ ಸಮಾಜದಲ್ಲಿ ಆಡಳಿತವು ಸರ್ವವ್ಯಾಪ್ತಿಯಾಗಿರುತ್ತದೆ. ಜೀವನದಿಯ ಸೆಳವಿಗೆ ಸಿಕ್ಕ ಕಡ್ಡಿಯಂತೆ ನಾವು ಬದುಕನ್ನು ಅಲಕ್ಷಿಸಲು ಸಾಧ್ಯವಿಲ್ಲ.

ಪರಿಸ್ಥಿತಿಯನ್ನು ಗಮನಿಸಿ ನಾವು ನಮ್ಮ ಗುರಿಯನ್ನು ಮುಟ್ಟಲು ಕೆಲವು ಯೋಜನೆಗಳನ್ನು ಹೂಡಬೇಕಾಗುತ್ತದೆ. ಮತ್ತು ಅವುಗಳನ್ನು ಕೃತಿಗಿಳಿಸಬೇಕಾಗುತ್ತದೆ. ಯಾವುದೇ ವ್ಯಕ್ತಿ ಅಥವಾ ಸಂಸ್ಥೆಯು ತಂತಮ್ಮ ಗುರಿಯು ಸಾಧನೆಗೆ ಹಮ್ಮುವ ಕಾರ್ಯವಿಧಾನವು ಆಡಳಿತವೆನಿಸುವದು. ಆಡಳಿತ ವಿಲ್ಲದ ಜೀವನರಂಗವೇ ವಿರಳ. ಮನೆಯಾಡಳಿತ, ಹೊಲದ ಆಡಳಿತ, ಗ್ರಾಮದ ಆಡಳಿತ, ಮಠದ ಆಡಳಿತ, ಹೀಗೆ ಆಡಳಿತವು ಸಾರ್ವತ್ರಿಕ ಸಂಗತಿಯಾಗಿದೆ. ಈ ದೃಷ್ಟಿಯಿಂದ ನೋಡಿದರೆ ಆಡಳಿತವು ಒಂದು ವ್ಯವಸ್ಥೆ ಎಂಬ ಅರ್ಥ ತಾನಾಗಿಯೇ ಸ್ಪಷ್ಟವಾಗುತ್ತದೆ. ಮನೆಯು ವ್ಯವಹಾರ ನಡೆ ಸುವದರಿಂದ ಮೊದಲು ಮಾಡಿ ಯುದ್ಧದ ವ್ಯವಸ್ಥೆಯು ವರೆಗೂ ಒಂದು ಕಾರ್ಯನಿರ್ವಹಣೆ ಬೇಕೇಬೇಕು. ಮಾನವ ಸಮಾಜದ ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ, ಸೈನಿಕ ಮೊದಲಾದ ಯಾವ ಕ್ಷೇತ್ರವೇ ಆಗಲಿ ಅಲ್ಲಿ ಆಡಳಿತವು ಅನಿವಾರ್ಯ.

ಮನೆಯು ಆಡಳಿತವು ಒಂದು ಮನೆತನವನ್ನು ಯಶಸ್ವಿ ಯಾಗಿ ನಡೆಸಲು ಮುಖ್ಯವಾಗಿರುವಂತೆ ಒಂದು ಗ್ರಾಮದ, ಪ್ರಾಂತದ, ರಾಜ್ಯದ ಮತ್ತು ಪ್ರಪಂಚಸರಕಾರದ ಆಡಳಿತವು ಆಯಾ ಕ್ಷೇತ್ರಗಳ ಕಕ್ಷೆಯಲ್ಲಿರುವ ಪ್ರಜೆಗಳ ಹಿತದೃಷ್ಟಿ ಯಿಂದ ಅವಶ್ಯವಾಗಿದೆ. ಒಂದು ಕುಟುಂಬವನ್ನು ನಿರ್ವಹಿ ಸುವುದು ಸಣ್ಣ ಕೆಲಸವಲ್ಲ. ಮನೆಗೊಬ್ಬ ಯಜಮಾನನ ಮಾರ್ಗದರ್ಶನ ಬೇಕಾಗುತ್ತದೆ. ಮನೆಯು ಆದಾಯು ಮತ್ತು ವೆಚ್ಚವನ್ನು ಸರಿದೂಗಿಸುವುದು, ಮನೆಯು ಎಲ್ಲರ

ಸೌಕರ್ಯಗಳ ಕಡೆಗೆ ಗಮನಕೊಡುವುದು, ಮದುವೆ ಮೊದಲಾದ ಸಾಮಾಜಿಕ ವಿಷಯಗಳಲ್ಲಿ ಮುಂದಾಳುತನ ವಹಿಸುವುದು, ಮನೆಯ ಅಂತಃಕಲಹವನ್ನು ಬಗೆಹರಿಸು ವುದು ಮೊದಲಾದ ಗೃಹಕೃತ್ಯಗಳನ್ನು ನಿರ್ವಹಿಸುವುದು ಮನೆಯ ಆಡಳಿತವೆಂದೆನಿಸುತ್ತದೆ. ಮನೆಯ ಒಡೆಯ ಒಡತಿಯರಿಬ್ಬರೂ ಮನೆಯ ಆಡಳಿತ ( House keeping) ವನ್ನು ನೋಡಿಕೊಳ್ಳಬೇಕಾಗುತ್ತದೆ. ಮನೆಯಲ್ಲಿ ವ್ಯವಸ್ಥೆ ಮತ್ತು ಶಿಸ್ತುಗಳಿರುವಂತೆ ರಾಜ್ಯದ ಆಡಳಿತದಲ್ಲಿ ಕೂಡ ಒಂದು ಬಿಗಿ ಮತ್ತು ಕ್ರಮ ಇರಬೇಕಾದದ್ದು ಆವಶ್ಯಕ. ಒಂದು ಮನೆಯಲ್ಲಿ ಪರಸ್ಪರ ಗೊತ್ತಿರುವ ಬಂಧುವರ್ಗದ ನಾಲ್ಕಾರು ಜನರಿದ್ದರೆ ಸರಕಾರಿ ಆಡಳಿತದ ಕಚೇರಿಗಳಲ್ಲಿ ಎಲ್ಲೆಲ್ಲಿಯವರೋ ಲಕ್ಷಾಂತರ ಜನರಿರುತ್ತಾರೆ. ಇವರ ನೇಮಕ, ಸಂಬಳ, ಶಿಸ್ತು, ಸಂತೃಪ್ತಿಗಳೂ, ಇವರು ಹೇಗೆ ತಂತಮ್ಮ ಕೆಲಸಗಳನ್ನು ಮಾಡುತ್ತಾರೆ ಮತ್ತು ಯಾವ ಯಾವ ಕಟ್ಟು ನಿಟ್ಟುಗಳಿಗೊಳಗಾಗಿ ತಮ್ಮ ತಮ್ಮ ಜವಾ ಬ್ದಾರಿಗಳನ್ನು ನಿರ್ವಹಿಸುತ್ತಾರೆ ಎಂಬುವೂ ಸಾರ್ವಜನಿಕ ಆಡಳಿತದ ವಿಷಯವಾಗಿದೆ.

ಸಾರ್ವಜನಿಕ ಆಡಳಿತವೆಂದರೇನು ಎಂಬ ವಿಷಯದಲ್ಲಿ ಸಾಮಾನ್ಯ ಜನರಲ್ಲಿಯೂ ವಿದ್ಯಾವಂತರಲ್ಲಿಯೂ ಸರಿಯಾದ ತಿಳಿವಳಿಕೆಯಿರುವದಿಲ್ಲ. ಇಂಗ್ಲೀಷ್ ಕಲಿತ ಅನೇಕರಲ್ಲಿ ಕೂಡ ಈ ಬಗ್ಗೆ ಸಾಕಷ್ಟು ತಪ್ಪು ಗ್ರಹಿಕೆ ಮತ್ತು ಗೊಂದಲಗಳಿವೆ.

ಎಲ್ಲ ರಾಜ್ಯಗಳಲ್ಲಿಯೂ ಹಿಂದಿನಿಂದ ಒಂದಿಲ್ಲ ಒಂದು

ಆಡಳಿತ ಪದ್ಧತಿಯಿದ್ದಿತು. ನಮ್ಮ ದೇಶದಲ್ಲಿಯೂ ಆಡಳಿತ ಸಾಗಿತ್ತು. ಆಡಳಿತ ಎನ್ನುವ ಪದ ಕನ್ನಡದಲ್ಲಿ ಇತ್ತೀಚೆಗೆ ಬಳಕೆಗೆ ಬಂದಿದೆ. ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಪರಿಪಾಲನೆ ಎಂಬ ಅರ್ಥದಲ್ಲಿ ಕವಿಗಳು ಇದನ್ನು ಉಪ ಯೋಗಿಸಿದ್ದಾರೆ. ಸಾರ್ವಜನಿಕ ಆಡಳಿತ ಎಂಬ ಪದ ೧೯ನೆಯ ಶತಮಾನದಲ್ಲಿ ಮೊಟ್ಟ ಮೊದಲು ಪ್ರಯೋಗಿಸಲ್ಪಟ್ಟಿತು. ಇಂಗ್ಲೀಷಿನಲ್ಲಿ ಸಾರ್ವಜನಿಕ ಅಭಿಪ್ರಾಯ (Public Opinion), ಸಾರ್ವಜನಿಕ ಹಣ ( Public Finance ), ಸಾರ್ವಜನಿಕ ಸೇವೆ (Public Service) ಮೊದಲಾದ ಮಾತುಗಳನ್ನಾಡುವಾಗ 'Public' ಎಂಬ ಪದವನ್ನು ಸಾರ್ವ ಜನಿಕ ಎಂಬ ಅರ್ಥದಲ್ಲಿ ಬಳಸಲಾಗಿದೆ. ಇದೇ ರೀತಿ ಸಾರ್ವ ಜನಿಕ ಆಡಳಿತವೆಂದರೆ ಸರಕಾರಿ ಆಡಳಿತವೆಂದು ಅರ್ಥವಾಗು ತ್ತದೆ. ಎಂದರೆ ಯಾವುದು ಖಾಸಗಿ ಆಡಳಿತವಲ್ಲವೋ ಅದು ಸಾರ್ವಜನಿಕವೆಂದೆನಿಸಿಕೊಳ್ಳುವುದು. ಒಬ್ಬ ಅಥವಾ ಹೆಚ್ಚಿಗೆ ಜನರು ಒಂದು ಉದ್ಯಮವನ್ನು ನಡೆಸುವುದು ಖಾಸಗೀ ಆಡಳಿತವಾಗುವುದು. ಲಿಮಿಟೆಡ್ ಕಂಪನಿಯ ಆಧಾರದ ಮೇಲೆ ಉದ್ಯೋಗ ಮಾಡುವುದು ಕೂಡ ಖಾಸಗಿ ಆಡಳಿತವೇ. ಲಾಭ ಗಳಿಸುವುದು ಖಾಸಗಿ ಆಡಳಿತದ ಗುರಿಯಾದರೆ, ಪ್ರಜಾಸೇವೆ ಸರಕಾರದ ಧ್ಯೇಯವಾಗಿದೆ. ಸಾರ್ವಜನಿಕ ಹಣ ದಿಂದ ನಡೆಯುವ ಸರಕಾರಿ ಚಟುವಟಿಕೆಗಳೆಲ್ಲವೂ ಸಾರ್ವ ಜನಿಕ ಆಡಳಿತದ ಕಕ್ಷೆಯಲ್ಲಿ ಬರುತ್ತವೆ. ಸರಕಾರದ ಗುರಿ ಗಳನ್ನು ಕಾರ್ಯಗತ ಮಾಡುವ ಸರ್ವಸನ್ನಾಹಗಳನ್ನು ಆಡ ಳಿತವೆಂದು ಹೇಳಬಹುದು. ಖಾಸಗಿ ಆಡಳಿತವನ್ನು ವ್ಯಾವ

ಹಾರಿಕ ಆಡಳಿತ (Business Administration) ಎಂದೂ ಕರೆಯಬಹುದು. ಖಾಸಗಿ ವ್ಯವಹಾರವನ್ನು ನಡೆಸುವುದಕ್ಕೂ ಸರಕಾರಿ ವ್ಯವಹಾರವನ್ನು ನೋಡಿಕೊಳ್ಳುವುದಕ್ಕೂ ಬೇಕಾದಷ್ಟು ಅಂತರವಿದೆ. ಇವೆರಡರಲ್ಲಿ ಯಾವುದು ಮೇಲು, ಯಾವುದರಲ್ಲಿ ದಕ್ಷತೆ, ಕಾರ್ಯತತ್ಪರತೆ ಮತ್ತು ಮಿತ ವ್ಯಯಗಳನ್ನು ಹೆಚ್ಚಾಗಿ ನೋಡಬಹುದು ಎಂದು ಕೇಳಬಹುದು. ಇದು ವಿವಾದಾಸ್ಪದ ವಿಷಯ. ಎಲ್ಲ ದೇಶಗಳಲ್ಲಿ ಒಂದೇ ರೀತಿಯ ಸಂಪ್ರದಾಯವಿಲ್ಲ. ಆಯಾ ದೇಶದ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳಿಗನುಗುಣವಾಗಿ ಸಂಪ್ರದಾಯ ಬೆಳೆಯುತ್ತದೆ. ದಕ್ಷತೆ ಮತ್ತು ಮಿತವ್ಯಯಗಳು ಎರಡರಲ್ಲೂ ಒಂದೇ ರೀತಿ ಇರಬಹುದು. ಭಾರಿ ಪ್ರಮಾಣದ ಖಾಸಗಿ ಸಂಸ್ಥೆಗಳ ಆಡಳಿತಕ್ಕೂ ಸರಕಾರಿ ಆಡಳಿತಕ್ಕೂ ಕೆಲವು ಹೋಲಿಕೆಗಳಿವೆ. ಲಿಮಿಟೆಡ್ ಕಂಪನಿಯ ಬೋರ್ಡಿನ ಡೈರೆಕ್ಟರುಗಳನ್ನು ಮಂತ್ರಿಮಂಡಲಕ್ಕೂ ಶೇರ ಹೋಲ್ಡರರನ್ನು ವಿಧಾನ ಮಂಡಲ ಸದಸ್ಯರಿಗೂ ಹೋಲಿಸಬಹುದು. ಇತ್ತಿತ್ತಲಾಗಿ ಖಾಸಗಿ ಸಂಸ್ಥೆಗಳ ಮೇಲೆ ಸರಕಾರದ ಹತೋಟಿ ಹೆಚ್ಚಾಗುತ್ತಿದೆ. ಆದರೂ ಸರಕಾರಿ ಆಡಳಿತದಲ್ಲಿಯೇ ನಿಯಮಾವಳಿಗಳು ಮತ್ತು ನಿಯಂತ್ರಣಗಳು ಹೆಚ್ಚು. ಸರಕಾರಿ ಆಡಳಿತವು ವಿಧಾನ ಮಂಡಲ ಮತ್ತು ಸರ್ವ ಜನರ ಮೆಚ್ಚಿಗೆಗೆ ಪಾತ್ರವಾಗುವಂತೆ ನಡೆಯಬೇಕು. ಎರಡರಲ್ಲೂ ಹೊಣೆಗಾರಿಕೆಯಿದೆ, ಲೆಕ್ಕ ಪರಿಶೋಧನೆ ಮೊದಲಾದ ಕ್ರಮಗಳಿವೆಯಾದರೂ ಸಾರ್ವಜನಿಕ ಆಡಳಿತವು ಸಾರ್ವಜನಿಕ ಹಿತ ಮತ್ತು ಮತದಂತೆ ನಡೆಯಬೇಕು.

ಸಾರ್ವಜನಿಕ ಆಡಳಿತವನ್ನು ಲೋಕ ಪ್ರಶಾಸನವೆಂದು ಅಖಿಲ ಭಾರತ ಮಟ್ಟದಲ್ಲಿ ಭಾಷಾಂತರ ಮಾಡಿರುತ್ತಾರೆ. ಮರಾಠಿಯಲ್ಲಿ ರಾಜಕಾರಭಾರವೆಂದು ಅನುವಾದ ಮಾಡುತ್ತಾರೆ. ದೇಶಭಾಷೆಗಳಲ್ಲಿ ಒಂದೊಂದು ರೀತಿಯ ಭಾಷಾಂತರಗಳಿವೆ. ಕನ್ನಡದಲ್ಲಿ ಪಬ್ಲಿಕ್ ಎಡ್ಮಿನಿಸ್ಟ್ರೇಶನ್ ಎಂಬ ಪದಕ್ಕೆ ಸಾರ್ವಜನಿಕ ಆಡಳಿತವೆಂಬ ಅನುವಾದವನ್ನಿಟ್ಟುಕೊಳ್ಳಬಹುದು. ಒಂದು ರಾಜ್ಯದಲ್ಲಿ ಉಪಲಬ್ಧವಿರುವ ಸಂಪತ್ ಮೂಲಗಳನ್ನು ಬಳಸಿಕೊಂಡು ಜನಹಿತಕ್ಕಾಗಿ ಮಾಡುವ ಚಟುವಟಿಕೆಗಳನ್ನು ಸಾರ್ವಜನಿಕ ಆಡಳಿತವೆನ್ನಲಡ್ಡಿಯಿಲ್ಲ. ಅನೇಕ ಜನರಿಗೆ ಆಡಳಿತದ ಬಗ್ಗೆ ಸರಿಯಾದ ತಿಳಿವಳಿಕೆಯಿರುವದಿಲ್ಲ. ಆಡಳಿತ, ಸರಕಾರ, ಕಾರ್ಯಾಂಗ, ಸಂವಿಧಾನ ಮೊದಲಾದ ಶಬ್ದಗಳನ್ನು ತಾರತಮ್ಯ ಜ್ಞಾನವಿಲ್ಲದೆ ಬಳಸುತ್ತಾರೆ. ಇವುಗಳಿಗಿರುವ ವ್ಯತ್ಯಾಸವನ್ನು ಅರಿಯುವುದು ಅಗತ್ಯ.

## ಸರಕಾರ ಮತ್ತು ಆಡಳಿತ

ಸರಕಾರವೆಂದರೆ ಸಾಮಾನ್ಯವಾಗಿ ಮಂತ್ರಿಮಂಡಲವೆಂದು ತಿಳಿಯಬೇಕು. ವಿಶಾಲಾರ್ಥದಲ್ಲಿ ಸರಕಾರವೆಂದರೆ ಕಾರ್ಯಾಂಗ, ಶಾಸನಾಂಗ ಮತ್ತು ನ್ಯಾಯಾಂಗ ಎಂದು ಎಲ್ಲರೂ ಬಲ್ಲರು. ಆದರೆ ಸರಕಾರ ಯಾರು ಎಂದು ಕೇಳಿದರೆ ಮಂತ್ರಿಮಂಡಲದ ಕಡೆ ನಮ್ಮ ದೃಷ್ಟಿ ಹೊರಳುತ್ತದೆ. ಸರಕಾರವು ಅಂತಿಮ ನಿರ್ಣಯಗಳನ್ನು ಕೈಕೊ

ಳ್ಳಬಲ್ಲದು. ಸರಕಾರವು ಯಜಮಾನ; ಆಡಳಿತವು ಆಳು. ಸರಕಾರದ ತೀರ್ಮಾನಗಳನ್ನು ಕೃತಿಗಿಳಿಸುವುದು ಆಡಳಿತದ ಕೆಲಸ. ಸರಕಾರ ಆಳುತ್ತದೆ. ಆಡಳಿತ ಆಳಾಗಿ ದುಡಿಯುತ್ತದೆ. ಇಷ್ಟಾದರೂ ಆಡಳಿತದ ಪಾತ್ರ ಅಮೌಲ್ಯವಾದದ್ದು. ಆಡಳಿತವಿಲ್ಲದೆ ಸರಕಾರವು ಒಂದು ಕ್ಷಣವೂ ಇರಲಾರದು. ಆಡಳಿತವೇ ಸರಕಾರವಾಗಬಹುದು. ಇದನ್ನು 'ಬ್ಯುರಾಕ್ರಸಿ' ಎಂದು ಕರೆಯುತ್ತಾರೆ. ಯಾವ ಬಗೆಯ ಸರಕಾರವಾಗಲಿ, ಯಾವ ಮಟ್ಟದ್ದಾಗಲಿ, ಆಡಳಿತವರ್ಗ ಇರಲೇಬೇಕು.

## ಆಡಳಿತದ ಅನೇಕ ಹಂತಗಳು

(ಅ) ಅಂತರರಾಷ್ಟ್ರೀಯ ಆಡಳಿತ: ಅಂತರರಾಷ್ಟ್ರೀಯ ಆಡಳಿತವು ಇತ್ತೀಚೆಗೆ ಜನ್ಮವೆತ್ತಿದೆ. ಇಂದು ಸಂಯುಕ್ತರಾಷ್ಟ್ರ ಸಂಸ್ಥೆಯಲ್ಲಿ ನೌಕರಿ ಮಾಡುತ್ತಿರುವ ಜನರು ಅಂತರರಾಷ್ಟ್ರೀಯ ನೌಕರರು. ಇವರ ಮುಂದಾಳು ಪ್ರಪಂಚ ಸಂಸ್ಥೆಯ ಮಹಾ ಕಾರ್ಯದರ್ಶಿ. ಈತನ ನೇತೃತ್ವದಲ್ಲಿ ಅನೇಕ ನೌಕರರು ಸಂಯುಕ್ತರಾಷ್ಟ್ರ ಕೇಂದ್ರ ಕಚೇರಿಯಲ್ಲಿಯೂ ಪ್ರಪಂಚದ ಇತರ ಕಡೆಗಳಲ್ಲಿಯೂ ತಂತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಸದಸ್ಯ ರಾಷ್ಟ್ರಕ್ಕೆ ಇಂತಿಷ್ಟು ಸ್ಥಾನಗಳನ್ನು ಕೊಡಬೇಕೆಂಬ ನಿಯಮವಿದೆ. ಎಲ್ಲ ಸದಸ್ಯ ರಾಷ್ಟ್ರಗಳ ಪೌರರಿಗೂ ಅಂತರ

ರಾಷ್ಟ್ರೀಯ ಆಡಳಿತದಲ್ಲಿ ಭಾಗವಹಿಸಲು ಅರ್ಹತೆಯಿದೆ. ನೌಕರರಿಗೆ ಬಹಳ ಆಕರ್ಷಣೀಯ ಸಂಬಳ ಸಿಕ್ಕುತ್ತದೆ.

(ಆ) ರಾಷ್ಟ್ರೀಯ ಆಡಳಿತ : ಪ್ರತಿ ರಾಜ್ಯದಲ್ಲಿ ಕೇಂದ್ರ ಸರಕಾರವಿರುತ್ತದೆ. ಇಂಗ್ಲಂಡಿನಲ್ಲಿರುವಂತೆ ಯೂನಿಟರಿ ಬಗೆಯ ಸರಕಾರವಿರಲಿ, ಅಮೇರಿಕ ಭಾರತಗಳಲ್ಲಿರುವಂತೆ ಫೆಡರಲ್ ಪದ್ಧತಿಯ ಸರಕಾರವಿರಲಿ, ರಾಷ್ಟ್ರದ ಅಭ್ಯುದಯಕ್ಕಾಗಿ ಕೇಂದ್ರೀಯ ಆಡಳಿತವು ಕೆಲಸ ಮಾಡುತ್ತದೆ. ಇಡಿಯ ರಾಷ್ಟ್ರದ ಉನ್ನತಿಗಾಗಿ ರಾಷ್ಟ್ರೀಯ ಸರಕಾರ ಶ್ರಮಿಸಬೇಕು. ರಾಷ್ಟ್ರೀಯ ಸರಕಾರದ ನೆರವಿಗಾಗಿ ಸಿವಿಲ್ ಸರ್ವೀಸು ಇದ್ದೇ ಇರುತ್ತದೆ. ರಾಜ್ಯ ಸರಕಾರದ ಹಲವಾರು ಇಲಾಖೆಗಳಲ್ಲಿ ಲಕ್ಷಾಂತರ ದೊಡ್ಡ ಅಧಿಕಾರಿಗಳೂ ಚಿಕ್ಕ ನೌಕರರೂ ಕೆಲಸ ಮಾಡುತ್ತಾರೆ. ಇವರ ಸೇವೆ ರಾಷ್ಟ್ರಕ್ಕೆ ತುಂಬ ಪ್ರಯೋಜನಕಾರಿಯಾಗಿದೆ.

(ಇ) ಸ್ಥಾನಿಕ ಆಡಳಿತ : ರಾಷ್ಟ್ರದ ಅಂಗಗಳಾದ ಪ್ರಾಂತಗಳಲ್ಲಿ ಪ್ರಾಂತೀಯ ಆಡಳಿತವಿರುತ್ತದೆ. ಪ್ರಾಂತೀಯ ಆಡಳಿತವನ್ನು ಸರಿಯಾದ ತಳಹದಿಯ ಮೇಲೆ ಕಟ್ಟಬೇಕು. ಪ್ರಾಂತಗಳ ಆಡಳಿತ ಸರಿಯಾಗಿದ್ದರೆ ಸರಕಾರ ಮಾಡುವ ವೆಚ್ಚದಿಂದ ಜನತೆಗೆ ಹೆಚ್ಚಿನ ಪ್ರಯೋಜನವಾಗುತ್ತದೆ. ಪೌರಸಭೆ, ಮೊದಲಾದ ಸ್ವಯಮಾಡಳಿತವಿರುವ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಆಡಳಿತಕ್ಕೂ ಕೂಡ ಒಂದು ಸೂತ್ರ ಮತ್ತು ವ್ಯವಸ್ಥಿತ ನೌಕರವರ್ಗ ಬೇಕು.

(ಈ) ಪಬ್ಲಿಕ್ ಕಾರ್ಪೊರೇಶನ್ ಮತ್ತು ರಾಷ್ಟ್ರೀಕೃತ ಉದ್ಯಮಗಳು : ಸರಕಾರಿ ಆಡಳಿತ ನಿರ್ವಹಣೆಗಾಗಿ ಇಲಾಖೆಗಳಿರುತ್ತವೆ. ಆದರೆ ಕೆಲವು ಬಗೆಯ ವ್ಯವಹಾರಗಳನ್ನು ಇಲಾಖೆಗಳಿಗೆ ವಹಿಸಿಕೊಡುವದಕ್ಕಿಂತ ಸ್ವಯಮಾಡಳಿತಾಧಿಕಾರವುಳ್ಳ ಸಂಸ್ಥೆಗಳಿಗೆ ವಹಿಸಿಕೊಟ್ಟರೆ ಉತ್ತಮ ಕೆಲಸವಾಗುತ್ತದೆ. ಇತ್ತಿತ್ತಲಾಗಿ ಪ್ರತಿ ರಾಜ್ಯದಲ್ಲಿ ಇಲಾಖೆ ಹತೋಟಿಗೆ ನಿಲುಕದ ಸ್ವತಂತ್ರ ಆಡಳಿತ ಸಂಸ್ಥೆಗಳು (Administrative Agencies) ಹೆಚ್ಚಾಗುತ್ತಿವೆ. ಅಮೇರಿಕಾದಲ್ಲಿ ಇವುಗಳನ್ನು ರೆಗ್ಯುಲೇಟೆಡ್ ಕಮೀಶನ್ನುಗಳೆಂದು ಕರೆಯಲಾಗುತ್ತಿದೆ. ಇವುಗಳನ್ನು ಕೆಲವರು Headless Fourth Branch of Government ಎಂದು ಸಂಬೋಧಿಸುತ್ತಾರೆ. ಇಂಗ್ಲಂಡ, ಭಾರತ ಮೊದಲಾದ ಕಡೆಗಳಲ್ಲೂ ಈ ಬಗೆಯ ಸಂಸ್ಥೆಗಳು ವಿಪುಲವಾಗಿ ಬೆಳೆಯುತ್ತಿವೆ. ಕೆಲವು ಉದ್ಯಮಗಳನ್ನು ಸರಕಾರವು ರಾಷ್ಟ್ರೀಕರಿಸಬಹುದು. ಬಸ್ಸುಗಳ ರಾಷ್ಟ್ರೀಕರಣ, ಚಿನ್ನದ ಗಣಿಗಳ ರಾಷ್ಟ್ರೀಕರಣ ಮೊದಲಾದವುಗಳನ್ನು ಉದಾಹರಿಸಬಹುದು. ಸ್ವಯಮಾಡಳಿತ ಪಡೆದ ವಿಶ್ವವಿದ್ಯಾಲಯಗಳಂತೆ ಇವು ಕಾರ್ಯಮಾಡುತ್ತವೆ. ಭಾರತದಲ್ಲಿ ವಿಮಾನಸಾರಿಗೆ ಕಾರ್ಪೊರೇಶನ್, ದಾಮೋದರ ಕೊಳ್ಳದ ಕಾರ್ಪೋರೇಶನ್, ತುಂಗಭದ್ರ ಕಾರ್ಪೋರೇಶನ್, ಜೀವವಿಮಾ ಕಾರ್ಪೋರೇಶನ್ ಮೊದಲಾದವುಗಳನ್ನು ನಾವು ಇಲ್ಲಿ ಉಲ್ಲೇಖಿಸಬಹುದು. ಇವು ಸರಕಾರದ ನೇರವಾದ ಇಲಾಖೆಗಳಂತಲ್ಲ. ಸರಕಾರವು ದೈನಂದಿನ ಆಡಳಿತದಲ್ಲಿ ಕೈ ಹಾಕುವದಿಲ್ಲ. ಸರಕಾರದ ಹಣವನ್ನು- ಇವುಗಳಲ್ಲಿ

ತೊಡಗಿಸುವುದರಿಂದ ಸರಕಾರದ ಪ್ರತಿನಿಧಿಗಳು ಇವುಗಳ ಆಡಳಿತದಲ್ಲಿ ಭಾಗವಹಿಸುತ್ತಾರೆ. ಈ ಸಂಸ್ಥೆ ಮತ್ತು ಸರಕಾರದ ಸಂಬಂಧವನ್ನು ಕಾಯಿದೆಯು ವಿಧಾಯಕಗೊಳಿಸುತ್ತದೆ. ಸರಕಾರವು ಪರೋಕ್ಷವಾಗಿ ಇಂತಹ ಸಂಸ್ಥೆಗಳ ಮೇಲೆ ಮೇಲ್ವಿಚಾರಣೆ ಮತ್ತು ಹತೋಟಿಯನ್ನಿಟ್ಟುಕೊಳ್ಳಬಹುದು. ಆಧುನಿಕ ರಾಜ್ಯದಲ್ಲಿ ಈ ಬಗೆಯ ಸಂಸ್ಥೆಗಳ ರಚನೆ ಮತ್ತು ಅವುಗಳ ಕಾರ್ಯನಿರ್ವಹಣೆಗಳಲ್ಲಿ ಸರಕಾರವು ಆಸ್ಥೆ ವಹಿಸಬೇಕಾಗಿದೆ. ಹೀಗೆ ಪಬ್ಲಿಕ್ ಕಾರ್ಪೋರೇಶನ್ ಮುಂತಾದ ಸಂಸ್ಥೆಗಳು ಸರಕಾರದ ನೇರವಾದ ಹತೋಟಿಗೊಳಗಾಗದಿದ್ದರೂ, ಪರಿಣಾಮಕಾರಿಯಾದ ಆಡಳಿತದ ಸಂಸ್ಥೆಗಳಾಗಿ ಕೆಲಸ ನಿರ್ವಹಿಸುತ್ತಿವೆ.

## ಆಡಳಿತದ ಪ್ರಾಮುಖ್ಯತೆ

ಇಂದು ಸರಕಾರಿ ಕಾರ್ಯಗಳು ಹೆಚ್ಚುತ್ತಲಿವೆ. 'ಆಡಳಿತ ರಾಜ್ಯ'ದ ಯುಗ ಆರಂಭವಾಗಿದೆ. ಆಡಳಿತದ ಹೊಣೆ ಬೆಳೆಯುತ್ತಿದೆ. ಸರಕಾರದ ಇಲಾಖೆಗಳು ಹೆಚ್ಚುತ್ತಿವೆ. ಇಂಗ್ಲೆಂಡಿನಲ್ಲಿ ೧೯೩೯ರಲ್ಲಿ ಮತ್ತು ೧೯೪೯ರಲ್ಲಿ ಇದ್ದ ಸರಕಾರಿ ಇಲಾಖೆಗಳನ್ನು ಪರಿಶೀಲಿಸಿದರೆ ಆಡಳಿತ ಯಂತ್ರ ಹೇಗೆ ಅಲ್ಲಿ ವಿಸ್ತಾರವಾಯಿತೆಂಬುದು ತಿಳಿಯುತ್ತದೆ. ಕೇವಲ ಹತ್ತು ವರ್ಷಗಳ ಅವಧಿಯಲ್ಲಿ ಅಲ್ಲಿ ಏಳು ಮಹತ್ವದ ಇಲಾಖೆಗಳು ತೆರೆಯಲ್ಪಟ್ಟವು. ಆಹಾರ, ರಾಷ್ಟ್ರೀಯ ವಿಮೆ, ಪಟ್ಟಣ ಮತ್ತು ಗ್ರಾಮಯೋಜನೆ, ಪೂರೈಕೆ, ಆಕಾಶಯಾನ,

ಉರುವಲು ಮತ್ತು ವಿದ್ಯುಚ್ಛಕ್ತಿ, ರಕ್ಷಣೆ ಇವು ಹೊಸದಾಗಿ ತಲೆ ಎತ್ತಿವೆ. ಹಳೆಯ ಇಲಾಖೆಗಳೂ ಪುನರ್ರಚನೆಗೊಂಡು ಬೆಳೆದಿವೆ. ಕ್ಯಾಬಿನೆಟ್ ಸೆಕ್ರೆಟರಿಯಟ್ಟಿನಲ್ಲಿ ಮೇಲ್ವಿಚಾರಣೆ ಮತ್ತು ಹೊಂದಾಣಿಕೆಯನ್ನುಂಟುಮಾಡಲು ಆರ್ಥಿಕ ಶಾಖೆ, ಅಂಕೆ ಸಂಖ್ಯೆಗಳ ಕಚೇರಿ, ಯೋಜನಾ ಶಾಖೆಗಳು ನೂತನ ವಾಗಿ ತೆರೆಯಲ್ಪಟ್ಟವು. ೧೯೩೮ ರಲ್ಲಿ ೩,೭೬,೦೦೦ ಜನ ನೌಕರಿ ಯಲ್ಲಿದ್ದು ಆ ಸಂಖ್ಯೆ ೧೯೪೬ ರ ಹೊತ್ತಿಗೆ ೭,೧೧,೦೦೦ಕ್ಕೆ ಏರಿತು. ೧೯೫೦ರಲ್ಲಿ ಶೇಕಡ ಹನ್ನೊಂದರಷ್ಟು ವಯಸ್ಕರು ಸರ ಕಾರಿ ನೌಕರಿಯಲ್ಲಿದ್ದರು. ಸೈನಿಕ ದಳ ಮತ್ತು ರಾಷ್ಟ್ರೀಕೃತ ಉದ್ಯಮಗಳ ನೌಕರರನ್ನು ಸೇರಿಸಿಕೊಂಡು ಸುಮಾರು ಶೇಕಡಾ ಇಪ್ಪತ್ತುನಾಲ್ಕರಷ್ಟು ವಯಸ್ಕರು ಸರಕಾರಿ ಸೇವೆಯಲ್ಲಿದ್ದರು. ಎಂದರೆ ಪ್ರತಿ ನಾಲ್ಕು ವಯಸ್ಕರಲ್ಲಿ ಒಬ್ಬರು ಸರಕಾರಿ ಉದ್ಯೋ ಗದಲ್ಲಿದ್ದ ಹಾಗಾಯಿತು.

ಅಮೇರಿಕ, ಫ್ರಾನ್ಸ್, ರಷ್ಯ, ಜರ್ಮನಿ, ಜಪಾನು ಮೊದ ಲಾದ ಇತರ ದೇಶಗಳಲ್ಲಿ ಸಹ ಸರಕಾರಿ ನೌಕರರ ಮತ್ತು ಇಲಾಖೆಗಳ ಸಂಖ್ಯೆ ದ್ವಿಗುಣಿತವಾಗಿದೆ. ಭಾರತ ಕೇಂದ್ರ ಸರಕಾರದ ನೌಕರರ ಸಂಖ್ಯೆ ೧೯೩೯ರಲ್ಲಿ (ಸೈನ್ಯ, ರೇಲ್ವೆ ಮತ್ತು ಅಂಚೆ-ತಂತಿ ಇಲಾಖೆಗಳನ್ನು ಬಿಟ್ಟು) ೪೯,೦೦೦ ವಿತ್ತು. ೧೯೫೧ರಲ್ಲಿ ೧,೭೦,೦೦೦ಕ್ಕೆ ಏರಿತು. ೧೯೫೫ರಲ್ಲಿ ೧,೯೦,೨೦೦ಕ್ಕೆ ಬಂದಿತು. ಸುಮಾರು ಹತ್ತು ವರ್ಷಗಳ ಅವಧಿಯಲ್ಲಿ ಕೇಂದ್ರ ಸರಕಾರದ ಸಿವಿಲ್ ನೌಕರರ ಸಂಖ್ಯೆ ಒಂದಕ್ಕೆ ನಾಲ್ಕರಷ್ಟು ಬೆಳೆಯಿತು. ಯುದ್ಧ ನಡೆದ ವರ್ಷ

ಗಳಲ್ಲಿಯೂ ಯುದ್ಧಾನಂತರವೂ ನೌಕರರ ಸಂಖ್ಯೆ ಜಾಸ್ತಿಯಾಯಿತು. ಪ್ರಾಂತ ಮತ್ತು ಸ್ಥಾನಿಕ ಸಂಸ್ಥೆಗಳ ಸರಕಾರಿ ನೌಕರರನ್ನೂ ಸೇರಿಸಿಕೊಂಡು ೧೯೫೧ ರಲ್ಲಿ ಸಮಗ್ರ ಭಾರತದಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳ ಸೇವಕರ ಸಂಖ್ಯೆ ಸುಮಾರು ೮೫ ಲಕ್ಷವನ್ನು ಮುಟ್ಟಿತ್ತು. ಸುಮಾರು ೧೫೦ ದಶಲಕ್ಷ ವಯಸ್ಕರಿರುವ ನಮ್ಮ ದೇಶದಲ್ಲಿ ಶೇ. ೫. ೧/೨ದಷ್ಟು ಮಂದಿ ಸರಕಾರಿ ಸೇವೆಯಲ್ಲಿದ್ದಂತಾಯಿತು. ಎಂದರೆ ಪ್ರತಿ ಇಪ್ಪತ್ತು ದುಡಿಯಾಳುಗಳಲ್ಲಿ ಒಬ್ಬನಿಗೆ ಸರಕಾರಿ ಹುದ್ದೆ ಸಿಕ್ಕಹಾಗಾಯಿತು.

ಪ್ರಪಂಚದ ಎಲ್ಲ ರಾಜ್ಯಗಳ ಆಡಳಿತದಲ್ಲಿ ಕೆಲವು ಸಾಮಾನ್ಯ ಲಕ್ಷಣಗಳು ಎದ್ದು ಕಾಣಿಸುತ್ತಿವೆ. ಸರಕಾರಿ ಇಲಾಖೆ ಮತ್ತು ನೌಕರರ ಸಂಖ್ಯೆ ವಿಪರೀತ ಬೆಳೆದು ಬಂದಿದೆ. ಆಡಳಿತ ಕೇಂದ್ರೀಕರಣ (Administrative Centralisation) ಹೆಚ್ಚುತ್ತಿದೆ. ಯುದ್ಧಕಾಲದ ಹೊಣೆ ಮತ್ತು ಯುದ್ಧಾನಂತರದ ಹೊರೆಗಳು ಇದಕ್ಕೆ ಮುಖ್ಯ ಕಾರಣ. ಸರಕಾರಿ ನೌಕರರ ಸಲುವಾಗಿ ಸಾರ್ವಜನಿಕ ವೆಚ್ಚ ಅಧಿಕವಾಗುತ್ತಿದೆ. ಭಾರತದ ಯಾವದೇ ರಾಜ್ಯದ ಪೋಲೀಸ ಇಲಾಖೆಯ ವೆಚ್ಚವನ್ನು ಉದಾಹರಣೆಗಾಗಿ ಪರಿಶೀಲಿಸಿ : ಹತ್ತು ವರ್ಷಗಳಲ್ಲಿ ವೆಚ್ಚ ಹತ್ತರಷ್ಟು ಏರಿದೆ. ಇನ್ನೊಂದು ಸಾರ್ವತ್ರಿಕ ಲಕ್ಷಣವೆಂದರೆ ಆಡಳಿತದಲ್ಲಿ ತಜ್ಞರ (Technicians) ಪಾತ್ರಕ್ಕೆ ಪ್ರಾಮುಖ್ಯತೆ ಬರುತ್ತಿದೆ. ಆರ್ಥಿಕ ತಜ್ಞರು, ಸಂಖ್ಯಾಶಾಸ್ತ್ರಜ್ಞರು, ಲೆಕ್ಕಿಗರು, ಕಾಯದೆ ಪಂಡಿತರು, ಎಂಜಿನಿಯ

ರರು, ವಿಜ್ಞಾನಿಗಳು, ಡಾಕ್ಟರರು—ಹೀಗೆ ನಾನಾ ಬಗೆಯ ನಿಪುಣರನ್ನು ವಿವಿಧ ಇಲಾಖೆಗಳಲ್ಲಿ ಸರಕಾರ ನೇಮಿಸಿಕೊಳ್ಳ ಬೇಕಾಗಿದೆ. ಸರಕಾರದ ವಾಣಿಜ್ಯೋದ್ಯಮಗಳನ್ನು, ಕೈಗಾರಿ ಕೆಗಳನ್ನು ನಡೆಸಲು ಆಯಾ ಕ್ಷೇತ್ರದಲ್ಲಿ ಶಿಕ್ಷಣ ಮತ್ತು ತರಬೇತಿ ಪಡೆದವರನ್ನು ನೇಮಿಸಿಕೊಳ್ಳಬೇಕಾಗಿದೆ. ಇದರಿಂದ ಇಂದಿನ ಆಡಳಿತದಲ್ಲಿ ಆರ್ಥಿಕ ಸಿವಿಲ್ ಸರ್ವೀಸ್ ಎಂಬ ಪಂಗಡ ತಲೆ ಎತ್ತುತ್ತಿದೆ. ರಾಷ್ಟ್ರೀಕೃತ ಉದ್ಯಮ ಮತ್ತು ಸರಕಾರಿ ಕೈಗಾರಿಕೆಗಳ ಆಡಳಿತ ನೋಡಿಕೊಳ್ಳಲು ವಿಶೇಷ ವಿಭಾಗಗಳು ಸ್ಥಾಪಿಸಲ್ಪಡುತ್ತಿವೆ. ಇಂದಿನ ಆಡಳಿತದಲ್ಲಿ ಯೋಜನೆಯ ಪಾತ್ರ ಪ್ರಭಾವಶಾಲಿಯಾಗಿದೆ. ಯೋಜನೆಯು ಇಂದಿನ ಆಡಳಿತದ ಹೃದಯವಾಗಿದೆ ಎಂದರೆ ತಪ್ಪಾಗದು. ಯೋಜನೆಯ ಗುರಿ ಸಂಪತ್ಸಾಧನೆಯಾಗಿರಲಿ ಅಥವಾ ಯುದ್ಧ ಸನ್ನಾಹವಾಗಿರಲಿ ಅದರ ಕೈವಾಡ ಆಡಳಿತದಲ್ಲಿ ಎದ್ದು ಕಾಣಿಸುತ್ತದೆ. ವಿಜ್ಞಾನದ ಮುನ್ನಡೆಗಾಗಿ, ಸಂಶೋ ಧನೆಗಾಗಿ ಪ್ರತಿ ರಾಷ್ಟ್ರ ಅಪಾರ ಹಣವನ್ನು ವೆಚ್ಚ ಮಾಡು ತ್ತಿರುವುದು ಇನ್ನೊಂದು ಪ್ರವೃತ್ತಿ. ಜನತೆಯ ಸುಖ ಜೀವನ ಸಾಧನಗೆ ಆಡಳಿತವು ಸಹಾಯಕವಾಗಬೇಕೆಂಬುವ ವಿಚಾರ ಎಲ್ಲ ಪ್ರಕಾರದ ಸರಕಾರಗಳ ಕೇಂದ್ರ ಸೂತ್ರ ವಾಗಿದೆ.

ಇಂತಹ ಸನ್ನಿವೇಶದಲ್ಲಿ ಸಾರ್ವಜನಿಕ ಆಡಳಿತಕ್ಕೆ ಪ್ರಾಮುಖ್ಯ ಉಂಟಾಗಿರುವುದು ಸೋಜಿಗದ ಮಾತಲ್ಲ. ಪಟ್ಟಣ್ಣನ್ನು ಒತ್ತಿ ಆಳುವ ಕಾಲ ಈಗ ಹೋಗಿದೆ. ಜಗತ್ತು

ಬಹಳ ಮುಂದೆ ಬಂದಿದೆ. ಆಡಳಿತ ನಡೆಸಲು ತಿಳಿವಳಿಕೆ, ತರಬೇತು ಹೊಂದಿದವರು ಬೇಕಾಗಿದ್ದಾರೆ. ಆಡಳಿತವೆಂದರೆ ಕಾಯಕವೆಂಬ ಸೇವಾಭಾವನೆ ಬೆಳೆಯಲಾರಂಭಿಸಿದೆ. ಶಿಕ್ಷಣ ಸಂಸ್ಥೆಗಳಲ್ಲಿ ಆಡಳಿತವನ್ನು ಒಂದು ವಿಷಯವನ್ನಾಗಿ ಕಲಿಸುವ ಪರಿಪಾಠವೇರ್ಪಟ್ಟಿದೆ. ಪಾಶ್ಚಾತ್ಯ ವಿಶ್ವವಿದ್ಯಾಲಯಗಳು ಸಾರ್ವಜನಿಕ ಆಡಳಿತ ಮತ್ತು ವ್ಯವಹಾರಿ ಆಡಳಿತಗಳನ್ನು ಕಲಿಸಲು ಮುಂದೆ ಬಂದಿವೆ. ಆಡಳಿತವು ಮುಖ್ಯವಾಗಿ ಒಂದು ವ್ಯಕ್ತಿ ಎನ್ನಬಹುದಾದರೂ ಆಡಳಿತ ಸಂಶೋಧನೆಗೆ ವಿಶ್ವವಿದ್ಯಾಲಯಗಳು ನೆರವಾಗುತ್ತಿರುವುದು ಸಂತೋಷದ ಸಂಗತಿ. ತತ್ತ್ವ ಮತ್ತು ಪ್ರಯೋಗಗಳ ಐಕ್ಯತೆ ಈ ಮೂಲಕ ಸ್ಥಾಪಿತವಾಗಿ ಸಾರ್ವಜನಿಕ ಆಡಳಿತದ ವಿದ್ಯಾರ್ಥಿ ಮತ್ತು ಆಡಳಿತಗಾರರಿಬ್ಬರ ಹಿತ ಸಾಧನೆಯಾದೀತೆಂದು ಆಶಿಸ ಬಹುದಾಗಿದೆ.

---

# ೨. ಆಡಳಿತ ಹಾಗೂ ಆವರಣ

ಆಡಳಿತವು ಅನೇಕ ಪ್ರಭಾವಗಳಿಗೊಳಗಾಗಿ ನಡೆಯುವುದು ನೈಜವಾದ ಸಂಗತಿ. ಒಂದು ದೇಶದ ಇತಿಹಾಸ, ಮತ್ತು ಸಾಮಾಜಿಕ ಆವರಣಗಳು ಆಡಳಿತದ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಬಲ್ಲವು.

ಒಂದು ದೇಶದ ರಾಜಕೀಯ ಸಂಸ್ಥೆಗಳು ಆ ದೇಶದ ಚಾರಿತ್ರಿಕ ಸನ್ನಿವೇಶಗಳ ಪ್ರತಿಬಿಂಬವೆನ್ನಲಡ್ಡಿಯಿಲ್ಲ. ಪ್ರಪಂಚದಲ್ಲಿ ಮುಂದುವರಿದ ರಾಷ್ಟ್ರಗಳಲ್ಲೊಂದಾದ ಬ್ರಿಟನ್ನಿನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಇಂಗ್ಲೀಷ್ ಜನರು ಇಂದು ಅನುಭವಿಸುತ್ತಿರುವ ಪ್ರಜಾಪ್ರಭುತ್ವ ಮತ್ತು ಆಡಳಿತ ಪದ್ಧತಿಗಳು ಪಿತ್ರಾರ್ಜಿತವಾಗಿ ನಡೆದು ಬಂದಿವೆ. ಅವರ ಸಾಂಕುಶ ಅರಸೊತ್ತಿಗೆ, ಕಾನೂನಿನ ಆಳಿಕೆ, ನ್ಯಾಯಸ್ಥಾನಗಳ ಸ್ವಾತಂತ್ರ್ಯ, ವ್ಯಕ್ತಿ ಸ್ವಾತಂತ್ರ್ಯ, ರಾಜಕೀಯ ಪಕ್ಷಗಳು, ಪಾರ್ಲಿಮೆಂಟಿನ ಸಾರ್ವಭೌಮ ಅಧಿಕಾರ, ಹೊಣೆಗಾರ ಮಂತ್ರಿಮಂಡಲ, ಪಕ್ಷಾತೀತ ಸರಕಾರಿ ನೌಕರವರ್ಗ ಇವೇ ಮೊದಲಾದ ಸಂಸ್ಥೆ ಮತ್ತು ಸಂಪ್ರದಾಯಗಳ ಬೇರುಗಳನ್ನು ಬ್ರಿಟನ್ನಿನ ಕಳೆದ ೮೦೦ ವರ್ಷಗಳ ಇತಿಹಾಸದ ಉದ್ದಕ್ಕೂ ಕಾಣಬಹುದಾಗಿದೆ. ಫ್ರಾನ್ಸ್ ದೇಶದ ರಾಜಕೀಯ ಮತ್ತು ಆಡ

ಳಿತ ಪದ್ಧತಿಗಳಲ್ಲಿ ಒಂದು ವೈಶಿಷ್ಟ್ಯವಿದೆ. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿಯೇ ಅಧಿಕಾರದ ಕೇಂದ್ರೀಕರಣವು ಫ್ರಾನ್ಸಿನಲ್ಲಿ ಪರಮಾವಧಿಯನ್ನು ಮುಟ್ಟಿದೆ. ಫ್ರಾನ್ಸಿನ ಮಹಾ ವಿಪ್ಲವದ ತರುವಾಯ ಅಲ್ಲಿಯ ಸಂವಿಧಾನಬ್ರಹ್ಮರು ಅಧಿಕಾರವನ್ನು ಹಂಚುವದರಿಂದ ಫ್ರಾನ್ಸಿನ ಐಕಮತ್ಯಕ್ಕೆ ಧಕ್ಕೆ ಬಂದೀತೆಂದು ಅಂಜಿ, ಕೇಂದ್ರೀಕೃತ ಆಡಳಿತ ಪದ್ಧತಿಗೆ ಜನ್ಮವಿತ್ತರು. ಫ್ರಾನ್ಸಿನ ಇನ್ನೊಂದು ವೈಶಿಷ್ಟ್ಯವೆಂದರೆ ಆಡಳಿತ ನಡೆಸುವ ಅಧಿಕಾರಿಗಳಿಗೆ ಕಾನೂನು ಮಾಡುವ ಮತ್ತು ನ್ಯಾಯಾಧೀಶರಾಗಿ ಅನೇಕ ವ್ಯವಹಾರಗಳಲ್ಲಿ ತೀರ್ಮಾನ ಕೊಡುವ ವಿಶೇಷ ಹಕ್ಕನ್ನು ಕೊಡಲಾಗಿದೆ. ಫ್ರಾನ್ಸ ದೇಶದ "ಆಡಳಿತ ನ್ಯಾಯಾಸ್ಥಾನಗಳು ಲೋಕಪ್ರಸಿದ್ಧವಾಗಿವೆ. ಒಟ್ಟಿನಲ್ಲಿ ಪ್ರಜಾಪ್ರಭುತ್ವಕ್ಕೆ ಆಧುನಿಕ ಫ್ರಾನ್ಸ ಮಾತೃಸ್ಥಾನವಾಗಿದೆ, ಸ್ಫೂರ್ತಿಯ ಸೆಲೆಯಾಗಿದೆ.

ಸಂಯುಕ್ತ ರಾಜ್ಯಪದ್ಧತಿ ಮತ್ತು ಅಧಿಕಾರ ಹಂಚಿಕೆಯ ತತ್ತ್ವಗಳು ಅಮೇರಿಕಾ ಸರಕಾರದ ಮುಖ್ಯ ಲಕ್ಷಣಗಳು. ಆಧುನಿಕ ಯುಗದಲ್ಲಿ ಮೊಟ್ಟಮೊದಲು ಸಂಯುಕ್ತ ರಾಜ್ಯದ ಪ್ರಯೋಗ ಮಾಡಿದ ರಾಷ್ಟ್ರವೆಂದರೆ ಅಮೇರಿಕ. ಅಮೇರಿಕದ ಸಂಯುಕ್ತ ರಾಜ್ಯ ವ್ಯವಸ್ಥೆಯು ಇತರ ರಾಜ್ಯಗಳಿಗೆ ಮಾದರಿಯಾಗಿದೆ. ಅಮೇರಿಕದ ಜನರು ಸ್ವಾತಂತ್ರ್ಯ ಪ್ರಿಯರು, ಸ್ವಯಮಾಡಳಿತದಲ್ಲಿ ನಂಬಿಕೆಯುಳ್ಳವರು. ರಾಜ್ಯಗಳ ಅಧಿಕಾರವನ್ನು ಪೂರ್ಣವಾಗಿ ಕೇಂದ್ರ ಸರಕಾರಕ್ಕೆ ವರ್ಗಾಯಿಸಿಕೊಡಲು ಅಲ್ಲಿಯ ರಾಜ್ಯಗಳು ಸಿದ್ಧವಾಗಿರಲಿಲ್ಲ. ಆದ್ದರಿಂದ ಸಂಯುಕ್ತ ರಾಜ್ಯವ್ಯವಸ್ಥೆಯನ್ನು ಹೂಡಬೇಕಾಯಿತು. ಅಮೇರಿ

ಕದ ಆಡಳಿತದ ಮೇಲೆ ಪರಿಣಾಮ ಮಾಡಿರುವ ಇನ್ನೊಂದು ತತ್ತ್ವವೆಂದರೆ ಅಧಿಕಾರವನ್ನು ವಿಭಜಿಸುವ ಪದ್ಧತಿ. ಇದರ ಪ್ರಕಾರ ಸರಕಾರದ ಮೂರು ಅಂಗಗಳಾದ ಕಾರ್‍ಯಾಂಗ, ಶಾಸನಾಂಗ ಮತ್ತು ನ್ಯಾಯಾಂಗಗಳ ಅಧಿಕಾರಗಳನ್ನು ಪ್ರತ್ಯೇಕಿಸಲಾಗಿದೆ. ಒಂದು ಇನ್ನೊಂದರ ಮೇಲೆ ಅಂಕುಶವಾಗಿ ಇರಲೆಂದು ಈ ವ್ಯವಸ್ಥೆ ಮಾಡಲಾಯಿತು. ಅಮೇರಿಕಾದ ಅಧ್ಯಕ್ಷ ಮತ್ತು ಶಾಸನ ಸಭೆಗಳಲ್ಲಿ ಪರಸ್ಪರ ನಿಯಂತ್ರಣವೇರ್ಪಟ್ಟಿದೆ. ವಾಸ್ತವವಾಗಿ ಅಧಿಕಾರಗಳನ್ನು ಸಂಪೂರ್ಣವಾಗಿ ಬೇರ್ಪಡಿಸಿ ಹಂಚುವುದು ಸಾಧ್ಯವಿಲ್ಲವಾದರೂ ಈ ಪದ್ಧತಿಯು ಅಮೇರಿಕದ ರಾಜಕಾರಣ ಮತ್ತು ಸರಕಾರಿ ಆಡಳಿತಗಳ ಮೇಲೆ ತುಂಬ ಪರಿಣಾಮ ಮಾಡಿದೆ. ಅಮೇರಿಕದ ಸಂವಿಧಾನ ಕರ್ತರು ವ್ಯಕ್ತಿಸ್ವಾತಂತ್ರ್ಯವನ್ನು ರಕ್ಷಿಸಬೇಕೆಂಬ ಅಪೇಕ್ಷೆಯಿಂದ ಅಧಿಕಾರ ವಿಭಜನೆಯ ತತ್ತ್ವಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರು.

ಒಂದು ದೇಶದ ಚಾರಿತ್ರಿಕ ಸನ್ನಿವೇಶಗಳಷ್ಟೇ ನಾಯಕರು ಸಹ ಮಹತ್ವಪೂರ್ಣವಾದ ಪ್ರಭಾವ ಬೀರಿದ್ದಾರೆ. ಅಮೇರಿಕದ ಸಂವಿಧಾನ ಮತ್ತು ಆಡಳಿತಪದ್ಧತಿಗಳ ಮೇಲೆ ಹ್ಯಾಮಿಲ್ಟನ್, ಜೆಫರ್ಸನ್, ಲಿಂಕನ್, ರೂಜವೆಲ್ಟ್ ಮೊದಲಾದವರು ಗಣನೀಯವಾದ ಪ್ರಭಾವವನ್ನುಂಟು ಮಾಡಿದರು. ಭಾರತದ ಸಂವಿಧಾನ ಮತ್ತು ರಾಜಕಾರಣಗಳನ್ನು ರೂಪಿಸುವಲ್ಲಿ, ಮಹಾತ್ಮಾ ಗಾಂಧಿ, ವಲ್ಲಭಭಾಯಿ ಮತ್ತು ಪಂಡಿತ ನೆಹರು ಮೊದಲಾದವರ ಕೈವಾಡವನ್ನು ಕಾಣಬಹುದು. ಭಾರತವನ್ನು ಜಾತ್ಯತೀತ ರಾಷ್ಟ್ರವೆಂದು ಘೋಷಿಸಲು ನೆಹರು ಅವರ

ವಿಶಾಲ ಧೋರಣೆಯೇ ಕಾರಣವಾಗಿದೆ. ಭಾರತೀಯ ಆಡಳಿತಕ್ಕೆ ಸಾಮ್ಯವಾದದ ದೃಷ್ಟಿಯನ್ನೀಯಲು ಅವರೇ ಕಾರಣಕರ್ತರಾಗಿದ್ದಾರೆ. ಹೀಗೆ ಒಂದು ದೇಶದ ಸರಕಾರ ರಚನೆ ಮತ್ತು ಆಡಳಿತದ ಬೆಳವಣಿಗೆಗಳಿಗೆ ಐತಿಹಾಸಿಕ ಸನ್ನಿವೇಶಗಳೂ ಪ್ರಭಾವಶಾಲಿ ನಾಯಕರೂ ನೆರವಾಗಬಹುದಾಗಿದೆ.

ಇನ್ನೊಂದು ಮುಖ್ಯ ಸಂಗತಿಯೆಂದರೆ, ಪ್ರತಿಯೊಂದು ಸರಕಾರಕ್ಕೂ ತಾತ್ವಿಕ ಹಿನ್ನೆಲೆಯಿರಬಹುದು, ರಾಜಕೀಯ ಅಥವಾ ಆರ್ಥಿಕ ಮಾರ್ಗದರ್ಶಕ ನೀತಿಗಳಿರಬಹುದು. ೧೯ನೆಯ ಶತಮಾನದಲ್ಲಿ ವ್ಯಕ್ತಿವಾದವು ಸರಕಾರದ ಕಾರ್ಯಕ್ಷೇತ್ರವನ್ನು ಸಂಕುಚಿತಗೊಳಿಸಿತು. ಸರಕಾರವು ಜನರ ಆಸ್ತಿ ಮತ್ತು ಪ್ರಾಣಗಳ ರಕ್ಷಣೆಯನ್ನಲ್ಲದೆ ಇತರ ಯಾವ ಕಾರ್ಯಗಳನ್ನೂ ಕೈಗೊಳ್ಳಬಾರದೆಂಬ ವಾದ ಅಂದು ಜನಪ್ರಿಯವಾಗಿತ್ತು. ಇಂದು ಈ ಅಭಿಪ್ರಾಯಕ್ಕೆ ಮನ್ನಣೆಯಿಲ್ಲ. ಸರಕಾರವು ಜನರ ಪ್ರಗತಿಯನ್ನು ಸಾಧಿಸಲು ದೊಡ್ಡ ಪ್ರಮಾಣದಲ್ಲಿ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂಬ ಅಭಿಪ್ರಾಯ ಹರಡುತ್ತಿದೆ. ಜರ್ಮನಿಯಲ್ಲಿ ಹಿಟ್ಲರನ ಸರಕಾರವು ಸರ್ವಾಧಿಕಾರಿ ಪ್ರಭುತ್ವವನ್ನು ನಡೆಸಿತು. ಸೋವಿಯೆಟ್ ರಷ್ಯದಲ್ಲಿ ಸರಕಾರವು ಪ್ರಜೆಗಳಿಗಾಗಿ ವಿವಿಧ ಚಟುವಟಿಕೆಗಳನ್ನು ಕೈಗೊಂಡಿದೆ. ರಾಷ್ಟ್ರದ ಸಂಪನ್ಮೂಲಗಳನ್ನು ರಾಷ್ಟ್ರೀಕರಿಸಿದೆ. ರಷ್ಯದ ಆರ್ಥಿಕ ಮತ್ತು ರಾಜಕೀಯ ನೀತಿಗಳು ಅಲ್ಲಿಯ ಸರಕಾರ ಮತ್ತು ಆಡಳಿತಗಳ ಮೇಲೆ ಬಹಳ ಪ್ರಭಾವ ಬೀರಿವೆ. ರಷ್ಯದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕಿಂತ ವ್ಯಕ್ತಿ ಹಿತಕ್ಕೆ ಮಹತ್ವ ಕೊಡಲಾಗಿದೆ. ಮಾರ್ಕ್ಸವಾದವು ರಷ್ಯ

ಸರಕಾರಕ್ಕೆ ಮಾರ್ಗದರ್ಶಿ ತತ್ತ್ವವಾಗಿದೆ. ಸರಕಾರವು ಆಡಳಿತ ವರ್ಗದಮೇಲೂ, ಪ್ರಜೆಗಳ ಮೇಲೂ ಹೆಚ್ಚಿನ ಹತೋಟಿಯನ್ನಿಟ್ಟುಕೊಂಡಿದೆ. ಆಡಳಿತಗಾರರು ಸರಕಾರದ ಮಾರ್ಗದರ್ಶಕ ಮೂಲ ತತ್ತ್ವಗಳನ್ನು ತಪ್ಪದೆ ಅನುಸರಿಸಬೇಕಾಗಿದೆ. ಒಂದು ಜನಾಂಗದ ರಾಜಕೀಯ ದೃಷ್ಟಿ, ಸಾಮಾಜಿಕ ಸಂಪ್ರದಾಯಗಳು, ನೈತಿಕ ಮತ್ತು ಧಾರ್ಮಿಕ ಬೆಲೆಗಳು ಮತ್ತು ಸಾಂಸ್ಕೃತಿಕ ನಡವಳಿಕೆಗಳು ಆಡಳಿತದ ಮೇಲೆ ಪರಿಣಾಮವನ್ನುಂಟುಮಾಡಬಲ್ಲವು. ಫ್ರಾನ್ಸಿನಲ್ಲಿ ಜನರು ತೆರಿಗೆ ಕೊಡುವದನ್ನು ತಪ್ಪಿಸುತ್ತಾರೆಂದೂ, ಇಂಗ್ಲಂಡಿನಲ್ಲಿ ರಾಷ್ಟ್ರಾಭಿಮಾನವು ಅತ್ಯಂತ ಉಚ್ಚಮಟ್ಟದ್ದೆಂದೂ ಪ್ರತೀತಿ ಇದೆ. ಉತ್ತಮ ಸಮಾಜದಿಂದ ಮಾತ್ರ ಉತ್ತಮ ಆಡಳಿತ ತಲೆ ಎತ್ತಬಲ್ಲುದು ಎಂಬದನ್ನು ನಾವು ಮರೆಯಬಾರದು.

ಆಧುನಿಕ ಆಡಳಿತದ ಮೇಲೆ ಮುಖ್ಯವಾಗಿ ಪ್ರಭಾವ ಬೀರಿರುವ ಅಂಶಗಳನ್ನು ಈ ರೀತಿ ವಿಂಗಡಿಸಬಹುದು :

ಸಂವಿಧಾನದ ಚೌಕಟ್ಟು, ರಾಜಕೀಯ ವ್ಯವಸ್ಥೆ, ವೈಜ್ಞಾನಿಕ ಮತ್ತು ತಾಂತ್ರಿಕ ಬೆಳವಣಿಗೆ ಮತ್ತು **ಜನರ ಮನೋಭಾವ.**

**ಸಂವಿಧಾನದ ಚೌಕಟ್ಟು :** ಇಂದಿನ ಕಾಲದಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟ ಸಂವಿಧಾನಗಳೇ ಹೆಚ್ಚು. ರಾಜ್ಯದ ಆಡಳಿತವು ಹೇಗೆ ನಡೆಯಬೇಕೆಂಬ ಬಗ್ಗೆ ಸಂವಿಧಾನದಲ್ಲಿ ಉಲ್ಲೇಖವಿರಬಹುದು. ಆಡಳಿತ ನಡೆಸುವುದೆಂದರೆ ದೇಶದ ಸಂವಿಧಾನವನ್ನು ಕಾರ್ಯಗತ ಮಾಡುವುದೆಂದು ಅರ್ಥವಾಗುತ್ತದೆ. ಆಡ

ಳಿತ ನಡೆಸುವವರು ಸಂವಿಧಾನವನ್ನು ಉಲ್ಲಂಘಿಸಬಾರದು. ಸಂವಿಧಾನಕ್ಕೆ ವಿರೋಧವಾಗಿ ವರ್ತಿಸುವ ಸರಕಾರಿ ನಿರ್ಧಾರಗಳನ್ನು ಪ್ರಶ್ನಿಸಿ ನ್ಯಾಯಾಸ್ಥಾನಕ್ಕೆ ಹೋಗಲು ಸಂವಿಧಾನವು ಪ್ರಜೆಗಳಿಗೆ ಹಕ್ಕುಗಳನ್ನು ಕೊಡ ಮಾಡಬಹುದು. ಭಾರತ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳು ಯಾವವು ಎಂಬುದನ್ನು ಉಲ್ಲೇಖಿಸಲಾಗಿದೆ. ಅವುಗಳನ್ನನುಭವಿಸಲು ಯಾರಿಂದಲಾದರೂ ಧಕ್ಕೆ ತಗಲಿದರೆ ಅಥವಾ ತಗಲುವಂತಿದ್ದರೆ ಸಂಬಂಧಪಟ್ಟವರು ಉಚ್ಚನ್ಯಾಯಾಸ್ಥಾನದಲ್ಲಿ ನ್ಯಾಯವನ್ನು ದೊರಕಿಸಿಕೊಳ್ಳಲು ಅವಕಾಶವಿದೆ. ರಾಜ್ಯದ ಆಡಳಿತವು ಸಂವಿಧಾನದ ಮಾರ್ಗದರ್ಶಕ ತತ್ತ್ವಗಳನ್ನನುಸರಿಸಿ ನಡೆಯಬೇಕು. ಕೇಂದ್ರ ಮತ್ತು ರಾಜ್ಯಸರಕಾರಗಳ ಅಧಿಕಾರವ್ಯಾಪ್ತಿ ಏನು ಎಂಬ ವಿಷಯದಲ್ಲಿ ನಮ್ಮ ಸಂವಿಧಾನವು ವಿವರವಾದ ಅಂಶಗಳನ್ನೊಳಗೊಂಡಿದೆ. ಆದ್ದರಿಂದ ಪ್ರತಿಯೊಂದು ಆಡಳಿತವು ಕೆಲವು ಕಟ್ಟುಗಳಿಗೊಳಗಾಗಿ ಸಾಗಬೇಕು. ಸಂವಿಧಾನದಲ್ಲಿ ಆಡಳಿತಗಾರರ ಹಕ್ಕು ಭಾಧ್ಯತೆಗಳನ್ನೂ ಉಲ್ಲೇಖಿಸಬಹುದು. ನೌಕರರನ್ನು ಯಾವ ರೀತಿ ನೇಮಿಸಿಕೊಳ್ಳಬೇಕು, ಅವರ ಮೇಲೆ ಯಾವ ರೀತಿ ಶಿಸ್ತಿನ ಕ್ರಮ ಕೈಕೊಳ್ಳಬಹುದು,ತಮಗೆ ಸರಕಾರದಿಂದ ಅನ್ಯಾಯವಾದರೆ ನೌಕರರು ಹೇಗೆ ಪರಿಹಾರ ದೊರಕಿಸಿಕೊಳ್ಳಬೇಕು ಎಂಬ ಬಗ್ಗೆ ನಮ್ಮ ಸಂವಿಧಾನವು ಸಾಕಷ್ಟು ವಿಧಿನಿಷೇದಗಳನ್ನೊಳಗೊಂಡಿದೆ.

ಅಮೇರಿಕದ ಸಂವಿಧಾನವು ಕೇಂದ್ರ ಮತ್ತು ರಾಜ್ಯ ಸರಕಾರಗಳ ಅಧಿಕಾರ ವ್ಯಾಪ್ತಿಯನ್ನು ತಿಳಿಸುವುದಲ್ಲದೆ ಆಡಳಿತ

ಸೂತ್ರಗಳನ್ನು ಹಿಡಿಯುವ ರಾಜಕೀಯ ನಾಯಕರು ಹೇಗೆ ನೇಮಕಗೊಳ್ಳಬೇಕೆಂಬುದನ್ನು ಸ್ಪಷ್ಟಪಡಿಸಿದೆ. ಅಮೇರಿಕದ ಅಧ್ಯಕ್ಷನ ಮತ್ತು ಸರಕಾರದ ಇತರ ಅಂಗಗಳ ಅಧಿಕಾರ ಮತ್ತು ಕರ್ತವ್ಯಗಳನ್ನು ಉಲ್ಲೇಖಿಸಿದೆ. ಸಂವಿಧಾನವನ್ನು ನಿಷ್ಠೆಯಿಂದ ಕಾರ್ಯಗತ ಮಾಡುವ ಹೊಣೆ ಅಧ್ಯಕ್ಷನ ಮೇಲೆ ಇದೆ. ಸಂವಿಧಾನದ ಮೂಲ ಅಂಶಗಳನ್ನು ನೆನಪಿನಲ್ಲಿಟ್ಟುಕೊಂಡು ಅಮೇರಿಕದ ಆಡಳಿತಗಾರರು ಮುಂದೆ ಸಾಗಬೇಕಾಗಿದೆ. ಸಂವಿಧಾನದ ಚೌಕಟ್ಟಿನಲ್ಲಿ ಮಾತ್ರ ಆಡಳಿತವು ಚಲಿಸಬೇಕು.

## ರಾಜಕೀಯ ಪ್ರಭಾವ

ರಾಜಕಾರಣ ಮತ್ತು ಆಡಳಿತಕ್ಕೆ ನಿಕಟವಾದ ಸಂಬಂಧವಿದೆ. ನೀತಿಗಳನ್ನು ನಿರ್ಧರಿಸುವುದು ( Policy-making ) ಮತ್ತು ಅವುಗಳನ್ನು ಕಾರ್ಯಗತ ಮಾಡುವುದು ಆಡಳಿತದಲ್ಲಿಯ ಎರಡು ಮುಖ್ಯ ಸಂಗತಿಗಳು. ಮೊದಲನೆಯದು ರಾಜಕಾರಣಿಗಳ ಕೆಲಸ, ಎರಡನೆಯದು ಆಡಳಿತ ವರ್ಗದ ಕೆಲಸ. ಚುನಾವಣೆಗಳ ಮೂಲಕ ಜನತೆಯ ಬೆಂಬಲ ಗಳಿಸಿ ರಾಜಕೀಯ ಪಕ್ಷಗಳು ವಿಧಾನ ಸಭೆಗಳಲ್ಲಿ ಸ್ಥಾನಗಳನ್ನು ಪಡೆಯುತ್ತವೆ. ವಿಧಾನಸಭೆಯಲ್ಲಿ ಕಾಯದೆ ಮಾಡುವುದು ರಾಜಕಾರಣಿಗಳ ಕೆಲಸ. ಮಂತ್ರಿಮಂಡಲದಲ್ಲಿ ಸರಕಾರಿ ಧೋರಣೆಗಳನ್ನೂ ಕಾರ್ಯಕ್ರಮಗಳನ್ನೂ ಗೊತ್ತುಪಡಿಸುವುದೂ ರಾಜಕಾರಣಿಗಳ ಕೆಲಸ. ಈ ಕೆಲಸಗಳಲ್ಲಿ ನೆರವಾಗಿ ಸರಕಾರವು ಮಾಡಿದ ನಿರ್ಧಾರಗಳನ್ನು ಕೃತಿಗಿಳಿಸುವುದು ಆಡಳಿತ ವರ್ಗದ ಹೊಣೆ.

ಆಡಳಿತಯಂತ್ರವು ಅನೇಕ ರೀತಿಯಲ್ಲಿ ಚುನಾಯಿತ ಮಂತ್ರಿಗಳಿಗೂ, ಶಾಸನಸಭಾಸದಸ್ಯರಿಗೂ ಸಹಾಯಕವಾಗುವುದು. ಕಾಯದೆ ಮತ್ತು ಇತರ ನಿಯಮಗಳನ್ನು ಮಾಡುವ ಕಾರ್ಯದಲ್ಲೂ, ಸರಕಾರಿ ನೀತಿಗಳನ್ನು ನಿರ್ಧರಿಸುವ ಕಾರ್ಯದಲ್ಲೂ ಸೂಕ್ತ ಸಲಹೆ–ಸಹಕಾರಗಳನ್ನು ಕೊಡುವುದು ಆಡಳಿತ ವರ್ಗದವರ ಕರ್ತವ್ಯ. ಸರಕಾರದವರು ಅಂತಿಮ ನಿರ್ಣಯ ಕೈಕೊಂಡ ಮೇಲೆ ಅದನ್ನು ಜಾರಿಗೆ ತರುವುದು ಅವರ ಹೊಣೆ. ಪ್ರಜಾಪ್ರಭುತ್ವದಲ್ಲಿ ಸರಕಾರವೆಂದರೆ ಆಳುವ ರಾಜಕೀಯ ಪಕ್ಷದ ಪ್ರತಿನಿಧಿ. ಅಧಿಕಾರಸೂತ್ರ ಹಿಡಿದ ಪಕ್ಷವು ತನ್ನ ಚುನಾವಣಾ ಘೋಷಣೆಗಳನ್ನು ಆದಷ್ಟು ಕಾರ್ಯಗತ ಮಾಡಲು ಬಯಸುತ್ತದೆ. ಸರಕಾರದ ಬದಲಾವಣೆ ಎಂದರೆ ರಾಜಕೀಯ ಮತ್ತು ಆರ್ಥಿಕ ಧೋರಣೆಗಳ ಬದಲಾವಣೆ ಎಂದು ತಿಳಿಯಬೇಕು. ಅಧಿಕಾರಿಗಳು ಆಳುವ ಪಕ್ಷದೊಡನೆ ಸಹಕರಿಸಬೇಕು. ಸರಕಾರದ ಬದಲಾವಣೆಯಾದರೆ ಆಡಳಿತದ ಮೇಲೆ ಎರಡು ರೀತಿ ಪರಿಣಾಮವಾಗಬಹುದು. ಒಂದನೆಯದಾಗಿ, ಸರಕಾರಿ ಧೋರಣೆಗಳಲ್ಲಿ ಹೊಸ ಹೆಜ್ಜೆಗಳನ್ನು ಗುರುತಿಸಬಹುದು. ಉದಾಹರಣೆಗೆ ೧೯೪೫ ರಲ್ಲಿ ಲೇಬರ್ ಪಕ್ಷವು ಅಧಿಕಾರಕ್ಕೆ ಬಂದಮೇಲೆ ಇಂಗ್ಲಂಡಿನ ವಿದೇಶ ನೀತಿಯಲ್ಲೂ ಆಂತರಿಕ ಧೋರಣೆಗಳಲ್ಲೂ ಗಣನೀಯವಾದ ಬದಲಾವಣೆಗಳಾದವು. ಭಾರತ, ಬರ್ಮ ಮೊದಲಾದ ರಾಜ್ಯಗಳು ಇಂಗ್ಲಂಡಿನ ಈ ಬದಲಾಯಿಸಿದ ಸರಕಾರಿ ಧೋರಣೆಯಿಂದಾಗಿಯೇ ಸ್ವಾತಂತ್ರ್ಯ ಪಡೆದವು. ಇಂಗ್ಲಂಡಿನಲ್ಲಿ ಸರಕಾರದ ಆರ್ಥಿಕ ಮತ್ತು ಸಾಮಾಜಿಕ ನಿರ್ಧಾರಗಳು

ಬಹಳ ಕ್ರಾಂತಿಕಾರಕವಾಗಿ ಮಾರ್ಪಟ್ಟವು. ರಾಷ್ಟ್ರೀಕರಣದ ನವ ಅಧ್ಯಾಯವನ್ನು ಅದು ಆರಂಭಿಸಿತು. ಮುಖ್ಯ ಉದ್ದಿಮೆಗಳ ರಾಷ್ಟ್ರೀಕರಣ ಮತ್ತು ಹೆಚ್ಚು ಜನರ ಕಲ್ಯಾಣಕಾರಿ ಯೋಜನೆಗಳನ್ನು ಸರಕಾರವು ಕೈಗೊಂಡಿತು. ಎರಡನೆಯದಾಗಿ, ಆಡಳಿತ ಹುದ್ದೆಗಳಲ್ಲಿ ಕೂಡ ಮಹತ್ತರವಾದ ಬದಲಾವಣೆಗಳಾಗಬಹುದು. ಬ್ರಿಟನ್ನಿನಲ್ಲಿ ಮಂತ್ರಿಮಂಡಲಗಳು ಬದಲಾದರೆ ಆಡಳಿತ ವರ್ಗಗಳಲ್ಲಿ ಯಾವ ಬದಲಾವಣೆಗಳೂ ಆಗುವುದಿಲ್ಲ. ಅಮೇರಿಕದಲ್ಲಿ ಸರಕಾರ ಬದಲಾಯಿಸಿದರೆ ಅನೇಕ ಸರಕಾರಿ ಹುದ್ದೆಗಳನ್ನು ಆಳುವ ಪಕ್ಷದವರು ತಮ್ಮ ಹಿಂಬಾಲಿಗರಿಗೆ "ದಾನ" ಮಾಡುತ್ತಾರೆ. ಡೆಮೊಕ್ರೆಟಿಕ್ ಪಕ್ಷವು ಸೋತು ರಿಪಬ್ಲಿಕನ್ ಪಕ್ಷದ ಐಸೆನ್‌ಹಾವರ್ ಅವರು ೧೯೫೨ರಲ್ಲಿ ಅಧ್ಯಕ್ಷರಾಗಿ ಚುನಾಯಿತರಾದಾಗ ಅಮೇರಿಕದ ರಾಯಭಾರಿಗಳು ಬದಲಾದರು. ಅನೇಕ ಆಡಳಿತ ಹುದ್ದೆಗಳಿಗೆ ರಿಪಬ್ಲಿಕನ್ ಪಕ್ಷದ ಬೆಂಬಲಿಗರನ್ನು ನೇಮಿಸಲಾಯಿತು. ತಮ್ಮ ಪಕ್ಷದ ವಿಶ್ವಾಸಕ್ಕೆ ಪಾತ್ರರಾದ ಜನರಿಗೆ ಅಧಿಕಾರ ಸ್ಥಾನಗಳನ್ನು ಹಂಚುವ ಈ ಪರಿಪಾಠ ಅಮೇರಿಕದಲ್ಲಿ ನಡೆದು ಬಂದಿದೆ. ಹೀಗೆ ರಾಜಕಾರಣವು ಆಡಳಿತದ ಮೇಲೆ ಅನೇಕ ಬಗೆಯಲ್ಲಿ ಪ್ರಭಾವ ಬೀರಬಲ್ಲದು. ಆಡಳಿತ ವರ್ಗವು ನೂತನ ಸರಕಾರಿ ಧೋರಣೆಗಳನ್ವಯ ತಲೆಬಾಗಿ ನಡೆದುಕೊಳ್ಳಬೇಕು. ಒಂದು ರಾಜ್ಯದ ರಾಜಕೀಯ ಆವರಣಕ್ಕೆ ಹೊಂದಿಕೊಂಡು ಸರಕಾರದ ಆಡಳಿತವರ್ಗವು ಕೆಲಸ ಮಾಡಬೇಕಾಗುವುದು. ಸರ್ವಾಧಿಕಾರ ಪ್ರಭುತ್ವವಿರುವ ರಾಜ್ಯಗಳಲ್ಲಿ ಆಡಳಿತವು ಸರಕಾರದ ಸೂತ್ರದ

ಬೊಂಬೆಯಂತೆ ವರ್ತಿಸಬೇಕಾಗುವುದು. ಅಲ್ಲಿ ಆಳುವ ಪಕ್ಷಕ್ಕೂ ಆಡಳಿಕ ವರ್ಗಕ್ಕೂ ಹೆಚ್ಚು ಸಾಮರಸ್ಯ ಉಂಟಾಗಿ ತಾದಾತ್ಮ್ಯ ಭಾವನೆಯಿಂದ ಸರಕಾರ ಮತ್ತು ನೌಕರರು ಕೆಲಸ ಮಾಡ ಬೇಕಾಗುತ್ತದೆ. ರಾಜಕಾರಣವು ಆಡಳಿತದ ಮೇಲೆ ಪೂರ್ಣವಾಗಿ ಪ್ರಭಾವ ಬೀರುವ ಉದಾಹರಣೆಯಿದು. ಒಟ್ಟಿನಲ್ಲಿ ರಾಜಕಾರ ಣಕ್ಕೂ ಆಡಳಿತಕ್ಕೂ ಬಹಳ ಸಂಬಂಧವಿದೆ ಎಂಬುದು ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ.

## ವಿಜ್ಞಾನ ಮತ್ತು ತಂತ್ರಗಳ ಪ್ರಭಾವ

ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯು ಆಡಳಿತದ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದೆ. ಸಾರಿಗೆ ಮತ್ತು ಸುದ್ದಿ ಸೌಕರ್ಯಗಳ ಸಹಾಯದಿಂದ ಬಹಳ ವಿಸ್ತೀರ್ಣವುಳ್ಳ ರಾಷ್ಟ್ರಗಳನ್ನು ಒಂದೇ ಆಡಳಿತದ ಕೆಳಗೆ ತರುವುದು ಸಾಧ್ಯ ವಾಗಿದೆ. ಭಾರತವು ಹಿಂದೆ ಒಂದೇ ರಾಜಕೀಯ ಆಳಿಕೆಗೆ ಒಳ ಪಡುವುದು ಶಕ್ಯವಿರಲಿಲ್ಲ. ಆದರೆ ಇಂದು ಅದು ಒಂದೇ ಆಡ ಳಿತದ ಘಟಕವಾಗಿದೆ. ವೈಜ್ಞಾನಿಕ ಸಂಶೋಧನೆಗಳ ಫಲವಾಗಿ ಎಂಜಿನಿಯರರು, ಡಾಕ್ಟರರು ಮೊದಲಾದ ತಜ್ಞರನ್ನು ನೇಮಿಸಿ ಕೊಳ್ಳುವುದು ಅನಿವಾರ್ಯವಾಗಿದೆ. ಪರಿಣತರನ್ನು ನೇಮಿಸಿ ಕೊಳ್ಳುವುದಲ್ಲದೆ ಇಂದು ಸರಕಾರಿ ಇಲಾಖೆಗಳಲ್ಲಿ ಬಹು ಬೆಲೆ ಯುಳ್ಳ ವೈಜ್ಞಾನಿಕ ಉಪಕರಣಗಳನ್ನು ಬಳಸುವುದು ಕೂಡ ಅಗತ್ಯವಾಗಿದೆ. ಉದಾಹರಣೆಗೆ ಸರಕಾರಿ ಆಸ್ಪತ್ರೆಯಲ್ಲಿ 'ಕ್ಷ' ಕಿರಣ ಯಂತ್ರ ಮೊದಲಾದ ವಸ್ತುಗಳನ್ನು ಉಪಯೋಗಿಸ

ಬೇಕಾಗಿದೆ. ವಿಜ್ಞಾನಿ ಮತ್ತು ತಾಂತ್ರಿಕ ಪರಿಣತರ ನೆರವಿನಿಂದ ಇಂದಿನ ಆಡಳಿತವು ದೊಡ್ಡ ಜಲಾಶಯ ಮತ್ತು ವಿದ್ಯುಚ್ಛಕ್ತಿ ಯೋಜನೆಗಳನ್ನು ಕೈಗೊಂಡು ಹೆಚ್ಚು ಜನಹಿತವನ್ನು ಸಾಧಿಸಲು ಅವಕಾಶವುಂಟಾಗಿದೆ. ವಿಜ್ಞಾನವು ಸಮಾಜದಲ್ಲಿ ಸೌಕರ್ಯ ಗಳನ್ನು ಹೆಚ್ಚಿಸಿರುವಂತೆ ಆಡಳಿತಕ್ಕೂ ಅಪಾರವಾದ ನೆರವಿತ್ತಿದೆ. ವಿಜ್ಞಾನದಿಂದಲೇ ಅಂತರರಾಷ್ಟ್ರೀಯ ಆಡಳಿತದ ಕನಸು ನನಸಾಗುತ್ತಿದೆ.

---

# ೩. ಒಳ್ಳೆಯ ಆಡಳಿತ

ಒಳ್ಳೆಯ ಭಾಷಣ ಅಥವಾ ಒಳ್ಳೆಯ ಹೆಂಡತಿ ಹೇಗಿರಬೇಕೆಂದು ಯಾರಾದರೂ ಕೇಳಿದರೆ ಎಲ್ಲರಿಗೂ ತೃಪ್ತಿಕರ ಉತ್ತರ ಕೊಡುವುದು ಕಷ್ಟ. ಒಂದೇ ಭಾಷಣವು ಪ್ರಶಂಸೆ ಮತ್ತು ಟೀಕೆಗೊಳಗಾಗಬಹುದು. ಒಬ್ಬ ಸ್ತ್ರೀವ್ಯಕ್ತಿಯ ನಡತೆಯನ್ನು ಕೆಲವರು ಮೆಚ್ಚಬಹುದು, ಮತ್ತೆ ಕೆಲವರು ಟೀಕಿಸಬಹುದು. ಇದೇ ರೀತಿ ಒಂದು ದೇಶದಲ್ಲಿ ಒಂದು ಕಾಲದಲ್ಲಿ ಒಳ್ಳೆಯ ಆಡಳಿತವೆಂದು ಹೆಸರಾದುದನ್ನು ಬೇರೆ ಕಾಲದಲ್ಲಿ ಜನರು ಪ್ರಶಂಸಿಸದಿರಬಹುದು. ಹಸಿದ ಬಡವನಿಗೆ ಒಂದು ರೊಟ್ಟಿ ಸಿಕ್ಕರೆ ಅದೇ ಅವನಿಗೆ ಸವಿಯಾದ ಆಹಾರವಾಗುತ್ತದೆ. ಬರೀ ರೊಟ್ಟಿಯ ತುಂಡನ್ನು ಉತ್ತಮ ಆಹಾರವೆಂದು ಬಗೆಯಲು ಎಲ್ಲರಿಗೂ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಒಳ್ಳೆಯ ಆಡಳಿತದ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳಿರಬಹುದು. ನೀವು ಬರೆದ ಕಾಗದಕ್ಕೆ ಸರಕಾರದಿಂದ ಒಂದು ತಿಂಗಳಲ್ಲಿಯೇ ಉತ್ತರ ಬಂದರೆ ನೀವು ಅದನ್ನು ದಕ್ಷ ಆಡಳಿತ ಪದ್ಧತಿ ಎನ್ನಬಹುದು. ಅದನ್ನೇ ಇನ್ನು ಕೆಲವರು ಟೀಕಿಸಿ ಒಂದು ವಾರದೊಳಗೆ ಉತ್ತರ ಬರದಿದ್ದರೆ ಅದನ್ನು ದಕ್ಷ ಆಡಳಿತವೆಂದು ಹೇಗೆ ಕರೆಯುವುದೆಂದು ಪ್ರಶ್ನಿಸಬಹುದು.

ಇಂತಹದೇ ಒಳ್ಳೆಯ ಆಡಳಿತವೆಂದು ಖಚಿತವಾಗಿ ಹೇಳುವುದು ಕಷ್ಟವಾದರೂ ಉತ್ತಮ ಆಡಳಿತದ ಕೆಲವು ಸಾಮಾನ್ಯ ಲಕ್ಷಣಗಳನ್ನು ಗುರುತಿಸಬಹುದು. ಒಳ್ಳೆಯ ಆಡಳಿತದಲ್ಲಿ ಏನಿರಬೇಕು ಮತ್ತು ಏನಿರಬಾರದು ಎಂಬ ಪ್ರಶ್ನೆಗೆ ಉತ್ತರ ಕೊಟ್ಟರೆ ಅದರ ವಿಷಯದಲ್ಲಿ ಸಾಕಷ್ಟು ತಿಳುವಳಿಕೆಯಾದೀತು. ಆಡಳಿತ ಮಾಡುವವರು ಪ್ರಥಮವಾಗಿ ಗಮನಿಸಬೇಕಾದುದೇನಂದರೆ ಪೂರ್ಣವಾಗಿ ವಿಷಯವನ್ನು ಅರ್ಥಮಾಡಿಕೊಳ್ಳದೆ ಕ್ರಮ ಕೈಕೊಳ್ಳಬಾರದು. ಇಂಗ್ಲೀಷಿನಲ್ಲಿ Understand before you administer ಎಂಬ ಅನುಭವದ ನುಡಿಯಿದೆ. ಸಂಗತಿಯನ್ನು ಗ್ರಹಿಸದೆ ಪರಿಹಾರ ಸೂಚಿಸಬಾರದು. ಹಾಗೆ ಮಾಡುವುದಾದರೆ 'ಎತ್ತು ಈಯಿತೆಂದರೆ ಹಕ್ಕೆಯಲ್ಲಿ ಕಟ್ಟು' ಎಂದಂತಾಗುವುದು. ಹೊಸದಾಗಿ ಕೆಲಸಕ್ಕೆ ಸೇರಿದ ಕರಣಿಕನೊಬ್ಬ ಮೇಲಿನವರು This paper is to be disposed of today ಎಂದು ಬರೆದರೆ ಆ ಕಾಗದವನ್ನು ಆ ದಿನವೇ ಕಸದ ಬುಟ್ಟಿಗೆ ಸಾಗಿಸಿದನಂತೆ! ಅರ್ಥ ಮಾಡಿಕೊಳ್ಳದೆ ಆಡಳಿತ ನಡೆಸಲು ಹೊರಟರೆ ಅನರ್ಥವಾಗುತ್ತದೆ. ಅಧಿಕಾರಿಗಳು ಕಾಯದೆ ಮತ್ತು ಆಡಳಿತ ತಂತ್ರಗಳನ್ನು ಚೆನ್ನಾಗಿ ಅರಿತಿರಬೇಕು. ಕಾನೂನಿನ ಹಿಂದಿನ ಇಂಗಿತವನ್ನು ಅರಿತು ಸಹಾನುಭೂತಿಯಿಂದ ನಡೆಯಬೇಕು. ಮೂಲ ತಿಳಿವಳಿಕೆ, ವಿಧೇಯತೆ, ದಕ್ಷತೆ, ಮಿತವ್ಯಯ, ಪ್ರಾಮಾಣಿಕತೆ ಮೊದಲಾದ ಗುಣಗಳಿದ್ದರೆ ಅದನ್ನು ಶ್ರೇಷ್ಠ ಆಡಳಿತವೆನ್ನಲಡ್ಡಿಯಿಲ್ಲ. ಈ ಕೆಲವು ಪದಗಳ ಅರ್ಥವನ್ನು ತಿಳಿದುಕೊಳ್ಳೋಣ.

**ವಿಧೇಯತೆ :** ಉತ್ತಮ ಆಡಳಿತದ ಒಂದು ಲಕ್ಷಣ ವೇನೆಂದರೆ ಅಧಿಕಾರಿಗಳ ವಿಧೇಯತೆ. ಸರಕಾರಿ ಸೇವೆಗೆ ಸೇರುವಾಗ ತಮ್ಮ ವಿಧೇಯತೆಯ ಬಗ್ಗೆ ಪ್ರಮಾಣವಚನ ವನ್ನು ಸ್ವೀಕರಿಸುತ್ತಾರೆ. ರಾಜ್ಯದ ಕಾನೂನು ಮತ್ತು ಸರ ಕಾರಗಳಿಗೆ ವಿರೋಧವಾಗಿ ನಡೆಯುವ ಅಧಿಕಾರಿಗಳನ್ನು ನೌಕರಿಯಿಂದ ತೆಗೆಯಬಹುದು. ಕೆಲವು ದೇಶಗಳಲ್ಲಿ ಕೆಲವು ರಾಜಕೀಯ ತತ್ತ್ವಗಳಲ್ಲಿ ನಂಬಿಕೆಯಿರುವವರನ್ನು ನೌಕರಿಗೆ ಸೇರಿಸಿಕೊಳ್ಳುವುದಿಲ್ಲ. ಅಮೇರಿಕದಲ್ಲಿ, ಕಮ್ಯುನಿಸ್ಟ ತತ್ತ್ವ ದಲ್ಲಿ ಸಹಾನುಭೂತಿಯಿರುವವರನ್ನು ಸರಕಾರಿ ನೌಕರಿಗೆ ತೆಗೆದುಕೊಳ್ಳುವದಿಲ್ಲ. ಇದು ಪ್ರಜಾಸತ್ತಾತ್ಮಕವೇ ಎಂದು ಕೆಲವರು ಪ್ರಶ್ನಿಸಬಹುದು. ಅಧಿಕಾರಿಗಳ ರಾಜಕೀಯ ಸ್ವಾತಂತ್ರ್ಯ ಪರಿಮಿತವಾದುದು. ಅವರು ಸರಕಾರಕ್ಕೆ ವಿಧೇ ಯರಾಗಿರಬೇಕು. ಸರಕಾರದ ಧೋರಣೆಗಳನ್ನೂ ಕೃತಿಗಳನ್ನೂ ಅವರು ಟೀಕಿಸುವಂತಿಲ್ಲ. ಸರಕಾರಿ ನೌಕರರು ಸರಕಾರದ ವಿರುದ್ಧ ಮುಷ್ಕರ ಹೂಡಲು ಅವಕಾಶವಿಲ್ಲ. ಸ್ವಾಮಿನಿಷ್ಠೆ ಇಲ್ಲದ ಅಧಿಕಾರಿಗಳಿಂದ ಕೂಡಿರುವ ಆಡಳಿತವು ಹದಗೆಡು ತ್ತದೆ. ವಿಧೇಯತೆ ಮತ್ತು ಶಿಸ್ತು ಒಳ್ಳೆಯ ಆಡಳಿತದ ಮುಖ್ಯ ತಳಹದಿ ಎನ್ನಲಡ್ಡಿಯಿಲ್ಲ.

**ದಕ್ಷತೆ :** ದಕ್ಷತೆ ಎಂಬ ಪದಕ್ಕೆ ವ್ಯಾಖ್ಯಾನ ಮಾಡು ವುದು ಸುಲಭವಲ್ಲ. ದಕ್ಷತೆ ಎಂದರೇನು ಅದನ್ನು ಕಂಡು ಹಿಡಿಯುವ ವಿಧಾನಗಳೇನು ಎಂಬ ಪ್ರಶ್ನೆಗಳಿಗೆ ಯಾರೂ ನೇರವಾಗಿ ಉತ್ತರ ಹೇಳಲಾರರು. ದಕ್ಷ ಆಡಳಿತ ಬೇಕು

ಎಂದು ಎಲ್ಲರೂ ಬೇಡುತ್ತಾರೆ. ಅದನ್ನು ಹೇಗೆ ಸಾಧಿಸ ಬಹುದು, ದಕ್ಷತೆಗೆ ಧಕ್ಕೆ ಬಂದರೆ ಆಡಳಿತದ ಮೇಲೆ ಎಂತಹ ಭೀಕರ ಪರಿಣಾಮವಾಗುವವು ಎಂಬುದನ್ನು ಪರಿಶೀಲಿ ಸೋಣ.

ದಕ್ಷತೆ ಎಂದರೇನು ಎಂಬ ಪ್ರಶ್ನೆಗೆ ಸುಲಭವಾಗಿ ಉತ್ತರಿಸಲಾಗದಿದ್ದರೂ ದಕ್ಷತೆಯ ಅಭಾವವನ್ನು ಗುರುತಿಸ ಬಹುದು. ರೈಲು ಮತ್ತು ಬಸ್ಸುಗಳು ಸಕಾಲಕ್ಕೆ ಬಾರ ದಿರುವುದು, ವಿಮಾನ ಸಾರಿಗೆಯಲ್ಲಿ ಹೆಚ್ಚು ಅಪಘಾತ ಗಳಾಗುವುದು, ಒಂದು ಪ್ರದೇಶದಲ್ಲಿ ಪೋಲೀಸರು ಕೇಡಿ ಗಳನ್ನು ಹಿಡಿಯದೆ ಕೊಲೆ ಸುಲಿಗೆಗಳು ಹೆಚ್ಚಾಗುತ್ತಿರು ವುದು— ಇವು ದಕ್ಷತೆಯ ಕೊರತೆಯ ಲಕ್ಷಣಗಳು. ಸಚಿ ವಾಲಯ ಮತ್ತು ಜಿಲ್ಲಾ ಮಟ್ಟದಲ್ಲಿ ಫೈಲುಗಳು ವೇಗ ವಾಗಿ ಚಲಿಸದೆ ನಿದ್ರೆ ಮಾಡುವುದೂ ಅಸಾಮರ್ಥ್ಯದ ನಿದ ರ್ಶನ. ಪ್ರತಿ ಸರಕಾರವು ದಕ್ಷತೆಯನ್ನು ಹೆಚ್ಚಿಸಲು ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನು ಮಾಡುತ್ತದೆ. ದಕ್ಷ ತೆಯು ಆಡಳಿತದಲ್ಲಿ ಹೆಚ್ಚಲು ಸಮರ್ಥ ಅಧಿಕಾರಿಗಳನ್ನು ನೇಮಿಸಿಕೊಳ್ಳಬೇಕು. ಯೋಗ್ಯ ಜನರು ಯೋಗ್ಯ ಸ್ಥಾನ ಗಳನ್ನು ಅಲಂಕರಿಸಬೇಕು. ಆಡಳಿತ ಏಣಿಯ ತುಟ್ಟ ತುದಿಯಲ್ಲಿರುವ ಹೊಣೆ ಹೊತ್ತ ಅಧಿಕಾರಿಗಳು ಅರ್ಹತೆ ಮತ್ತು ಅನುಭವವುಳ್ಳವರಾಗಿರಬೇಕು; ತಮ್ಮ ಕಸಬನ್ನು ಚೆನ್ನಾಗಿ ಅರಿತಿರಬೇಕು. ಸರಿಯಾದ ಮೇಲಧಿಕಾರಿಗಳ ಮಾರ್ಗದರ್ಶನ, ಸರಿಯಾದ ಆಡಳಿತ ಮಾರ್ಗಗಳು ಅಧಿ ಕಾರಿಗಳ ಕರ್ತವ್ಯನಿಷ್ಠೆ, ಸರಿಯಾದ ಹತೋಟಿ ಮತ್ತು

ಶಿಸ್ತು ಇರುವಕಡೆ ದಕ್ಷತೆ ಅಧಿಕವಾಗುತ್ತದೆ. ನೌಕರರ ನೇಮಕ, ಬಡ್ತಿ ಮೊದಲಾದ ವಿಷಯಗಳಲ್ಲಿ ಪಕ್ಷಪಾತವಿಲ್ಲದೆ ನಿಯಮಗಳಿಗನುಸಾರವಾಗಿ ನಿರ್ಧಾರ ಕೈಗೊಳ್ಳುವ ಸಂಪ್ರದಾಯಗಳಿಂದ ದಕ್ಷತೆಯು ಹೆಚ್ಚುತ್ತದೆ. ಲೋಕ ಸೇವಾ ಆಯೋಗದ ಸದಸ್ಯರು ಪ್ರಭಾವಗಳಿಗೀಡಾಗದೆ ನಡೆದರೆ ನೌಕರರಲ್ಲಿ ವಿಶ್ವಾಸ ಹುಟ್ಟಿ ಅವರು ಮನಸ್ಸಿಟ್ಟು ದುಡಿಯುವರು. ನೌಕರರಿಗೆ ತಮ್ಮ ಸುರಕ್ಷಿತತೆಯ ಬಗ್ಗೆ ಭರವಸೆ ಇರಬೇಕು. ನಿಸ್ಪೃಹತೆಯಿಂದ ದುಡಿಯುವವರಿಗೆ ಮನ್ನಣೆ ದೊರೆಯಬೇಕು. ಯೋಗ್ಯರಿಗೆ ಸ್ಥಾನ ಮಾನಗಳು ಸಿಕ್ಕದೆ ಯೋಗ್ಯತೆ, ಅರ್ಹತೆ, ಅನುಭವಗಳಿಲ್ಲದವರಿಗೆ ಹೆಚ್ಚಿನ ಸ್ಥಾನಗಳು ಸಿಗುವುದಾದರೆ ಆಡಳಿತವು ಜಡವಾಗುತ್ತದೆ. ಆಕರ್ಷಣೀಯ ಸಂಬಳ ಮತ್ತು ಇತರ ಸೌಲಭ್ಯಗಳಿರುವ ಕಡೆ ದಕ್ಷ ಮತ್ತು ಪ್ರತಿಭಾಶಾಲಿ ಜನರು ಬರುತ್ತಾರೆ. ಮುಖ್ಯ ಹುದ್ದೆಗಳಲ್ಲಿರುವವರು ಒಳ್ಳೆಯ ಪ್ರಾಮಾಣಿಕರೂ ಸಮರ್ಥರೂ ಆಗಿರಬೇಕು. ಅವರಿಗೆ ಆಕರ್ಷಣೀಯ ಸಂಬಳ ಶ್ರೇಣಿಯನ್ನು ದೊರಕಿಸಬೇಕು. ಸಂಬಳದಿಂದ ತೃಪ್ತರಾಗದ ನೌಕರರು ಲಂಚಕ್ಕೆ ಕೈಯೊಡ್ಡಬಹುದು. ಲಂಚದ ಪರಿಪಾಠ ಬಿದ್ದರೆ ಸರಕಾರಿ ಕೆಲಸಗಳು ತಡವಾಗುತ್ತವೆ. ಕೈತುಂಬ ಸಂಬಳ ಪಡೆಯುವ ಅಧಿಕಾರಿಗಳು ಲಂಚಕ್ಕೆ ಕೈಹಾಕುವುದಿಲ್ಲವೆಂದು ಹೇಳಲಿಕ್ಕೆ ಬರುವುದಿಲ್ಲವಾದರೂ ಎಲ್ಲ ವರ್ಗಗಳ ನೌಕರರಿಗೆ ತೃಪ್ತಿದಾಯಕ ಸಂಬಳವೇರ್ಪಡಿಸುವುದು ಅಗತ್ಯ. ಲಂಚದ ಪ್ರಸಂಗಗಳನ್ನು ಸರಕಾರವು ಹಗುರವಾಗಿ ಕಾಣದೆ ತಪ್ಪಿತಸ್ಥರನ್ನು

ಬಲವಾಗಿ ಶಿಕ್ಷಿಸಬೇಕು. ಆಡಳಿತದಲ್ಲಿ ಲಂಚವೊಂದೇ ಭ್ರಷ್ಟಾಚಾರವಲ್ಲ. ನಾನಾರೂಪದಲ್ಲಿ ಅಧಿಕಾರಿಗಳು ಲಂಚ ಅಥವಾ ಇತರ ಪ್ರಭಾವಗಳಿಗೆ ಒಳಗಾಗಬಹುದು. ಈ ದೃಷ್ಟಿಯಿಂದಲೂ ಅಧಿಕಾರಿಗಳ ವರ್ತನೆಯ ಬಗ್ಗೆ ಸೂಕ್ತ ನಿಯಮಾವಳಿಗಳನ್ನು ರಚಿಸಬೇಕು. ಅಧಿಕಾರಿಗಳು ತಮ್ಮ ಮತ್ತು ತಮ್ಮ ಕುಟುಂಬ ವರ್ಗದ ಹೆಸರಿನಲ್ಲಿರುವ ಆಸ್ತಿಯ ವಿವರಗಳನ್ನು ಪ್ರತಿ ವರ್ಷ ಕೊಡುವಂತೆ ಸರಕಾರವು ನೋಡಿಕೊಳ್ಳಬೇಕು.

ಮಂದ ಆಡಳಿತವು ದಕ್ಷತೆಯ ಲಕ್ಷಣವಲ್ಲ. ಇದನ್ನು ಇಂಗ್ಲೀಷಿನಲ್ಲಿ 'ಕೆಂಪುದಾರಿಕೆ' ( Red Tapism ) ಎಂದು ಹೇಳುತ್ತಾರೆ. 'ಕೆಂಪುದಾರಿಕೆ' ಆಡಳಿತದ ಸೋಮಾರಿತನವನ್ನು ಸೂಚಿಸುತ್ತದೆ. ಸರಕಾರಿ ಕಚೇರಿಗಳಲ್ಲಿ ಕೆಂಪು ದಾರದೊಳಗೆ ಸಿಕ್ಕು ಕೊಳೆಯುತ್ತಿರುವ ಕಾಗದಗಳನ್ನು ನೀವು ನೋಡಿರಬಹುದು. ಕೆಂಪು ದಾರವನ್ನು ಬಿಚ್ಚಿ ಕಾಗದಗಳನ್ನು ಸಕಾಲದಲ್ಲಿ ಮುಗಿಸಿ ಕಳಿಸದಿದ್ದರೆ ಅದನ್ನು ಕೆಂಪುದಾರಿಕೆ ಎನ್ನಲಡ್ಡಿಯಿಲ್ಲ. ಇಷ್ಟು ಅವಧಿಯಲ್ಲಿ ಇಂತಿಷ್ಟು ಕಾಗದಗಳನ್ನು ಆಯಾಯ ಆಡಳಿತ ಘಟ್ಟಗಳಲ್ಲಿ ಮುಗಿಸಿ ಕಳಿಸಬೇಕೆಂಬ ನಿರ್ಬಂಧಗಳಿರುತ್ತವೆ. ಅವುಗಳನ್ನು ಮುರಿದರೆ ಆಡಳಿತ ತಡವಾಗುತ್ತದೆ. ನ್ಯಾಯವಾದ ತಡ ಆಕ್ಷೇಪಾರ್ಹವಲ್ಲ. ಸರಕಾರಿ ಆಡಳಿತವೆಂದರೆ ಕಾನೂನು ಪ್ರಕಾರ ನಡೆಯಬೇಕು. ನಿಯಮಗಳನ್ನು ನೋಡಿ ನಿರ್ಧಾರಗಳನ್ನು ಕೊಡಬೇಕು. ಆದ್ದರಿಂದ ಯಾವ ಸಾರ್ವಜನಿಕ ಆಡಳಿತದಲ್ಲೇ ಆಗಲಿ, ನಿಂತ ಕಾಲಮೇಲೆ ತೀರ್ಮಾನಗಳಾಗಲಾರವು. ಜನ

ಕಾಯುಬೇಕು. ಆದರೆ ವರ್ಷಗಟ್ಟಲೆ ಜನರು ಕಾಯಲಾರರು. ಸಾರ್ವಜನಿಕರ ಹಿತಕ್ಕಾಗಿಯೇ ಆಡಳಿತವಿದೆಯೆಂದಮೇಲೆ ದೀರ್ಘಕಾಲದ ನಿಧಾನವನ್ನು ಜನರು ಸಹಿಸುವದಿಲ್ಲ. ಅಧಿಕ ತಡವಾಗುವ ಆಡಳಿತದಿಂದ, ಮಲಬದ್ಧತೆಯಿಂದ ಶರೀರದ ಆರೋಗ್ಯಕ್ಕೆ ತೊಂದರೆಯಾಗುವಂತೆ, ಸರಕಾರದ ದಕ್ಷತೆಗೆ ಧಕ್ಕೆಯುಂಟಾಗುತ್ತದೆ. ಭಾರತದ ಒಂದು ರಾಜ್ಯದಲ್ಲಿ ನಿಧನ ಹೊಂದಿದ ನಿವೃತ್ತ ನೌಕರನ ಹೆಂಡತಿಯೊಬ್ಬಳು ಆರು ವರ್ಷ ವಾದ ಮೇಲೂ ಗಂಡನ ವಿರಾಮ ವೇತನವನ್ನು ಪಡೆಯಲು ಸಾಧ್ಯವಾಗಲಿಲ್ಲ. ಇದನ್ನು ದಕ್ಷತೆ ಎನ್ನಲಾಗುತ್ತಿದೆಯೇ ? ದಕ್ಷತೆ ಯನ್ನು ಉಳಿಸಲು ಮತ್ತು ಬೆಳೆಸಲು ಕೆಂಪುದಾರಿಕೆಯನ್ನು ಹೊಡೆದುಹಾಕಬೇಕು. ಮೇಲೆ ಸೂಚಿಸಿದ ಸೌಕರ್ಯ ಮತ್ತು ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ಸರಕಾರವು ದಕ್ಷತೆ ಯನ್ನು ಸಂವರ್ಧಿಸಲು ಒಂದು ಪ್ರತ್ಯೇಕ ಶಾಖೆಯನ್ನು ತೆರೆಯ ಬೇಕಾಗುತ್ತದೆ. ದಕ್ಷತಾ ನಿರೀಕ್ಷಣೆ (Efficiency Survey) ನಡೆಸಿ, ಆಡಳಿತದ ದಕ್ಷತೆಯ ಮಟ್ಟವನ್ನು ನೋಡಬಹುದು. ಆಡಳಿತದ ದಕ್ಷತೆಯನ್ನು ಎಲ್ಲಾ ಇಲಾಖೆಗಳಲ್ಲೂ, ಎಲ್ಲಾ ಹಂತ ಗಳಲ್ಲೂ ನಿರೀಕ್ಷಿಸುವುದು ಕಷ್ಟ. ಆದರೂ ಸ್ಥೂಲವಾಗಿ ಯಾರು ಯಾರು ಎಷ್ಟು ಕಾರ್ಯವನ್ನು ಎಷ್ಟು ಅವಧಿಯಲ್ಲಿ ಮುಗಿಸ ಬೇಕೆಂಬ ಬಗ್ಗೆ ಕೆಲವು ಸೂಚನೆಗಳಿರಬೇಕು. ಇತ್ತೀಚೆಗೆ ಭಾರತ ದಲ್ಲಿ Organization and Methods ಶಾಖೆಯನ್ನು ತೆರೆಯ ಲಾಗಿದೆ. ಇದರ ಮೂಲಕ ದಕ್ಷತೆಯನ್ನೂ ಆಡಳಿತದಲ್ಲಿ ಏಕತೆ ಯನ್ನೂ ಸಾಧಿಸಲಾಗುತ್ತಿದೆ. ಇಂಗ್ಲೆಂಡಿನಲ್ಲಿ ಟ್ರೆಜರಿಯೂ,

ಅಮೇರಿಕಾದಲ್ಲಿ ಎಫಿಸಿಯೆನ್ಸಿ ಬ್ಯೂರೋ ಎಂಬ ಸಂಸ್ಥೆಯೂ ಈ ಕೆಲಸ ಮಾಡುತ್ತಿವೆ. ಭಾರತದ ರಾಜ್ಯಗಳಲ್ಲಿ ಎಫಿಸಿಯೆನ್ಸಿ ಆಡಿಟ್ ಎಂಬ ಶಾಖೆಗಳು ಕಾರ್ಯ ನಿರ್ವಹಿಸುತ್ತಿವೆ. ಒಟ್ಟಿನಲ್ಲಿ ಆಡಳಿತಕ್ಕೆ ದಕ್ಷತೆಯೇ ಶೃಂಗಾರ. ದಕ್ಷತೆಯನ್ನು ಹೆಚ್ಚಿಸಲು ಸರಕಾರಗಳು ಸತತವಾಗಿ ಪ್ರಯತ್ನಿಸುತ್ತವೆ. ಅನೇಕ ಕೋನ ಗಳಿಂದ ಈ ಪ್ರಶ್ನೆಯನ್ನು ಪರಿಹರಿಸಬೇಕು. ದಕ್ಷತೆಯು ಸಕಲ ಪಡಿ ಪದಾರ್ಥಗಳ ವಸ್ತುವಾಗಿದೆ. ಇದರ ಸಲುವಾಗಿ ಕೈಗೊಳ್ಳ ಬಹುದಾದ ಪ್ರತಿ ಹೆಜ್ಜೆಯೂ ಸ್ವಾಗತಾರ್ಹವಾಗಿದೆ. ವೈಜ್ಞಾನಿಕ ತಿಳುವಳಿಕೆ ಮತ್ತು ವೈಜ್ಞಾನಿಕ ವಸ್ತುಗಳನ್ನು ಧಾರಾಳವಾಗಿ ಬಳಸುತ್ತಿರುವ ಇಂದಿನ ಆಡಳಿತದಲ್ಲಿ ದಕ್ಷತೆಯ ಆವಶ್ಯಕತೆ ಎಂದಿಗಿಂತಲೂ ಹೆಚ್ಚಾಗಿದೆ. ವ್ಯವಹಾರಿ ಆಡಳಿತವಾಗಲಿ ಸಾರ್ವ ಜನಿಕ ಆಡಳಿತವಾಗಲಿ ದಕ್ಷತೆಯಿದ್ದರೆ ಮಾತ್ರ ಜನಪ್ರಿಯವಾಗ ಬಲ್ಲದು. ಆಡಳಿತ ಯಂತ್ರವು ದಕ್ಷವಾಗಿ ನಡೆಯುವಂತೆ ಆಗಾಗ್ಗೆ ಪರೀಕ್ಷಿಸಿ ಲೋಪದೋಷಗಳನ್ನು ಸರಿಪಡಿಸುವುದು ಆವಶ್ಯಕ ವಾಗಿದೆ.

ಅವಿಧೇಯತೆ, ದುಂದುಗಾರಿಕೆ, ಆಲಸಿಕೆ,ಲಂಚ, ಪಕ್ಷಪಾ ತತನ ಮೊದಲಾದ ಅನಿಷ್ಟ ಪದ್ಧತಿಗಳಿಂದ ಆಡಳಿತ ಮಟ್ಟವು ಅಧೋಗತಿಗಿಳಿಯುತ್ತದೆ.ಆಡಳಿತದಲ್ಲಿರುವ ಕೊಳೆಗಳನ್ನು ಕಳೆದು ಹಸನುಮಾಡುವುದು ಸರಕಾರದ ಆದ್ಯ ಕರ್ತವ್ಯ. ಹಣಕಾಸಿನ ಆಡಳಿತ ಚೊಕ್ಕವಾಗಿದ್ದರೆ ಸಾರ್ವಜನಿಕ ಆಡಳಿತ ಅಚ್ಚುಕಟ್ಟಾಗಿ ರುತ್ತದೆ. ಹಣಕಾಸಿನ ಇಲಾಖೆಯು ಆಡಳಿತದಲ್ಲಿ ಹೊಂದಾಣಿಕೆ ಮತ್ತು ನ್ಯಾಯಮಾಪ ವೆಚ್ಚವಿರುವಂತೆ ಗಮನ ಕೊಡಬಲ್ಲದು.

ಸಾರ್ವಜನಿಕ ವೆಚ್ಚದ ಸಂಬಂಧವಾಗಿ ಯೋಗ್ಯ ನಿಯಮಗಳನ್ನು ರಚಿಸಿ ಅವುಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು ಅದರ ಕರ್ತವ್ಯ. ಮಹಾ ಲೇಖಾ ಪರೀಕ್ಷಕನು (Auditor General) ಆಡಳಿತದಲ್ಲಿ ನ್ಯಾಯವಾದ ರೀತಿಯಲ್ಲಿ ವೆಚ್ಚವಾಗಿದೆಯೋ ಇಲ್ಲವೋ ಎಂಬುದನ್ನು ನಿರೀಕ್ಷಿಸುತ್ತಾನೆ. ಸಾರ್ವಜನಿಕ ವೆಚ್ಚ ಸರಿಯಾಗಿ ಆಗುವಂತೆ ವ್ಯವಸ್ಥೆ ಮಾಡುವುದು ಉತ್ತಮ ಆಡಳಿತವನ್ನು ಸಾಧಿಸುವ ಮುಖ್ಯ ಮಾರ್ಗವಾಗಿದೆ.

ಒಳ್ಳೆಯ ಆಡಳಿತದ ಲಕ್ಷಣಗಳೆಲ್ಲವನ್ನೂ ಇಲ್ಲಿ ವಿವರಿಸುವುದು ಸಾಧ್ಯವಿಲ್ಲ. ನುರಿತ ಆಡಳಿತಗಾರರಾಗಿದ್ದ ಶ್ರೀರಾಜಗೋಪಾಲಾಚಾರಿಯವರು ಒಳ್ಳೆಯ ಆಡಳಿತದ ಬಗ್ಗೆ ಆಡಿರುವ ಮಾತುಗಳನ್ನು ಸಂಗ್ರಹಿಸಿಕೊಡುವುದು ಅಪ್ರಸ್ತುತವೆನಿಸದು.

ಯಾವ ಆಡಳಿತವೇ ಆಗಲಿ, ಯೋಗ್ಯ ಅಧಿಕಾರಿಗಳ ಪಾತ್ರ ಹಿರಿಯದು. ನಿಯಮಗಳು ಮತ್ತು ಕೆಲಸದ ರೀತಿಗಿಂತ ಅಧಿಕಾರ ನಡೆಸುವವರ ಗುಣಗಳೇ ಮುಖ್ಯ. ಇಂದು ಭಾರತಕ್ಕೆ ದಕ್ಷ ಆಡಳಿತ ವರ್ಗದ ಅವಶ್ಯಕತೆ ಹೆಚ್ಚಾಗಿದೆ. ಅಲ್ಪತೆ, ಪಕ್ಷಪಾತಗಳು, ಒಂದು ಪಂಗಡದ ಜನರ ತೃಪ್ತಿಗಾಗಿ ತೋರಿಸುವ ರಿಯಾಯತಿಗಳು, ಕೋಮುವಾರು ಭಾವನೆಗಳು ಬಹು ಕಾಲ ಬಾಳಲಾರವು. ಆಡಳಿತ ನಿಜವಾದ ದಕ್ಷತೆಗೆ ಗಮನ ಕೊಡದಿದ್ದರೆ ಇವು ಕೇವಲ ಒಳಜಗಳಗಳಿಗೂ, ಘರ್ಷಣೆಗಳಿಗೂ ದಾರಿಯಾಗುತ್ತವಷ್ಟೆ. ಆಡಳಿತವು ದಕ್ಷವಾಗಿರಬೇಕು.

ಸಲಹೆಗಳನ್ನು ತೂಗಿನೋಡುವದಕ್ಕೂ ಮತ್ತು ಆಡಳಿತ ವಿಷಯಗಳನ್ನು ಸರಿಯಾಗಿ ನಿರ್ಣಯಿಸುವದಕ್ಕೂ ಬೇಕಾದ ಶಕ್ತಿ

ಮತ್ತು ಜ್ಞಾನಗಳಿರಬೇಕು ಒಳ್ಳೆಯ ಆಡಳಿತಗಾರನಿಗೆ. ನ್ಯಾಯ ವಾಗಿ ತೀರ್ಮಾನ ಮಾಡುವುದು ಒಂದು ಸಾಹಸವೇ ಸರಿ. ಇದೇ ಒಳ್ಳೆಯ ಆಡಳಿತಗಾರನ ಅರ್ಹತೆ. ನ್ಯಾಯವಾದ ಮತ್ತು ಶೀಘ್ರ ವಾದ ನಿರ್ಣಯಗಳು ಆಡಳಿತಗಾರನ ದಕ್ಷತೆಯನ್ನು ಎತ್ತಿ ತೋರಿಸುತ್ತವೆ. ಶಿಕ್ಷಣದಿಂದ ಇದು ಬರುವುದಾದರೂ, ಎಲ್ಲ ರಿಗೂ ಈ ಶಕ್ತಿ ಇರಬಹುದು. ಈ ಶಕ್ತಿಯನ್ನು ಕಂಡುಹಿಡಿದು ಅದಕ್ಕೆ ತಕ್ಕಂತೆ ಕೆಲಸ ಮಾಡಿಸುವುದು ಆಡಳಿತಗಾರನ ಇನ್ನೊ ಂದು ಕರ್ತವ್ಯ. ಸರಕಾರಿ ಹುದ್ದೆಗಳಲ್ಲಿರುವವರೂ ಮತ್ತು ಸರಕಾರಕ್ಕೆ ಸಂಬಂಧಿಸಿದವರೂ, ಶೀಘ್ರವಾಗಿ ತಕರಾರುಗಳಿಲ್ಲದೆ, ಸ್ಪಷ್ಟವಾದ ಮತ್ತು ಅಧಿಕಾರಯುಕ್ತವಾದ ನಿರ್ಣಯಗಳನ್ನು ಮಾಡಬೇಕು. ಒಮ್ಮೆ ಮಾಡಿದ ನಿರ್ಣಯದ ಬಗ್ಗೆ ಏನು ತಕ ರಾರುಗಳೂ ಇರಬಾರದು. ಹಾಗೆಂದು ಶೀಘ್ರ ನಿರ್ಣಯವು ವಿಚಾರಪರವಾದುದಲ್ಲ ಎನ್ನುವಂತಿಲ್ಲ. ಆಡಳಿತಗಾರನು ತನ್ನ ಸಲಹೆಗಾರರಿಂದ ವಿಷಯಗಳನ್ನು ಶೀಘ್ರವಾಗಿ ಗ್ರಹಿಸಬೇಕು. ಎಲ್ಲರ ಸಲಹೆಗಳನ್ನೂ ತಿಳಿದಮೇಲೆ ತನ್ನ ನಿರ್ಣಯವನ್ನು ಮಾಡಬೇಕು. ಒಮ್ಮೆ ಪೂರ್ಣ ಚರ್ಚೆಯಾಗಿ ವಿಷಯವನ್ನು ನಿರ್ಣಯಿಸಿದ ಮೇಲೆ ಎಲ್ಲರಿಗೂ ಒಂದೇ ನಿರ್ಣಯವು ಒಳ್ಳೆಯ ದೆಂಬ ಭಾವನೆ ಬರಬೇಕು. ಜಾರಿಗೆ ತರುವ ನೌಕರರಲ್ಲಿ ತಮ್ಮನ್ನು ಎತ್ತಿ ಹಿಡಿಯಲು ಮೇಲಿನ ಅಧಿಕಾರಿಗಳೂ ಆಡಳಿತಗಾರರೂ ಇದ್ದಾರೆಂಬ ಭಾವನೆ ಬರಬೇಕು. ಜಾರಿಗೆ ತರುವಾಗ ಮೊದಲ ಬಾರಿ ಸಿಕ್ಕ ಆಕ್ರಮಣಕ್ಕೆ ಹೆದರಿ ಬೇರೊಂದು ದಾರಿ ಹಿಡಿಯು ವಂತಾಗಬಾರದು. ಇದು ಪ್ರಜಾರಾಜ್ಯದ ಅಧಿಕಾರಿ ವಲಯ

ಗಳಲ್ಲಿ ಕಂಡುಬರಬೇಕಾದುದು ಆಗತ್ಯ. ಇದು ಅನೇಕ ಆಡಳಿತ ಗಾರರ ಗೆಲವನ್ನು ಸಾರಿ ಹೇಳುತ್ತದೆ.ಅದರ ಹಾಗೆಯೇ ಕೆಲವರ ಸೋಲನ್ನೂ ಸಾರುತ್ತದೆ.

ನಿರ್ಣಯುಗಳು ಶೀಘ್ರವಾಗಿರಬೇಕು. ಚರ್ಚೆಗಳು ಸಂಪೂರ್ಣವಾಗಿರಬೇಕು. ಅಲ್ಲೊಂದು ಇಲ್ಲೊಂದು ಸಲಹೆ ಗಳಿಂದ ಆಡಳಿತಗಾರರು ತಮ್ಮ ಮನಸ್ಸನ್ನು ತುಂಬಿಕೊಳ್ಳಬಾ ರದು. ತಮ್ಮಿಂದ ನಿರ್ಣಯು ಮಾಡಲಾಗಲಿಲ್ಲವೆಂದು ವಿಷಯು ವನ್ನು ಒತ್ತಟ್ಟಿಗೆ ಸರಿಸುವಂತಾಗಬಾರದು. ಸದಾ ಚರ್ಚೆಗ ಳಾಗುತ್ತಿರುವ ಈ ಪ್ರಪಂಚದಲ್ಲಿ ಒಂದು ನಿರ್ಣಯುವು ಸರಿಯಾ ದುದೆಂದು ಹೇಳಲಾಗುವದಿಲ್ಲ. ಆದರೆ ನಿರ್ಣಯು ಮಾಡದಿ ರುವುದಕ್ಕಿಂತ ಇದು ಲೇಸು. ಒಂದು ನಿರ್ಣಯುವೇ ವಾತಾವ ರಣವನ್ನೂ ಜನರ ಮನಸ್ಸನ್ನೂ ತಿರುಗಿಸಲು ಸಹಾಯುಕವಾಗಬ ಹುದು. ಶಾಸ್ತ್ರಜ್ಞರ ದೃಷ್ಟಿಯಿಂದ ಸರಿಯಲ್ಲದ ಕೆಲವು ನಿರ್ಣಯುಗಳು, ವಾತಾವರಣದ ಮತ್ತು ಮಾನಸಿಕ ವ್ಯತ್ಯಾಸಗ ಳಿಂದ ಸರಿಯಾದ ನಿರ್ಣಯುವಾಗಬಹುದು. ಕೆಲಸಕ್ಕೆ ತಕ್ಕ ಗಳಿಕೆಯೂ ಅಷ್ಟೇ ಮುಖ್ಯ. ಆದರ್ಶ ಆಡಳಿತಗಾರನಿಗೆ ' ಯಾವುದು ಮುಖ್ಯ ' ಎನ್ನುವಂತೆಯೇ ' ಯಾವಾಗ ಸರಿ ' ಎನ್ನುವುದೂ ತಿಳಿದಿರಬೇಕು. ಇದನ್ನು ತಿಳಿಯುವ ಜ್ಞಾನ, ಅನೇಕ ವಿಷಯುಗಳನ್ನು ತಿಳಿದು ಅವುಗಳಿಂದ ಒಳ್ಳೆಯುದನ್ನೇ ಆರಿಸುವವರಲ್ಲಿ ಇರುತ್ತದೆ. ಇದು ಆಡಳಿತದಲ್ಲಿ ಕೆಲವರು ಗೆದ್ದು ಕೆಲವರು ಸೋಲುವ ಕಾರಣವನ್ನು ತೋರಿಸುತ್ತದೆ. ವಿಷಯುಗಳನ್ನು ತೀರ್ಮಾನ ಮಾಡುವಾಗ ವಿಚಾರಪರತೆ ಅತ್ಯ

ವಶ್ಯಕ. ಆಡಳಿತಗಾರನು ತನ್ನ ಕೈಕೆಳಗಿನವರನ್ನು ಸರಿಯಾದ ಹತೋಟಿಯಲ್ಲಿಟ್ಟುಕೊಂಡಿರಬೇಕು. ಹಾಗೆಯೇ ಎಷ್ಟೇ ಕಷ್ಟ ಬಂದರೂ ಆಡಳಿತ ನೀತಿಯನ್ನು ಕಾರ್ಯಗತ ಮಾಡುವಾಗ ಕೈಬಿಡದೆ ಅವರನ್ನು ನಡೆಸಿಕೊಳ್ಳಬೇಕು. ಅವರೊಡನೆ ಕಲೆತು ತಾನೆಂಥ ಒಳ್ಳೆಯ ಮುಂದಾಳು ಎಂಬುದನ್ನು ತೋರಿಸಿಕೊಡ ಬೇಕು. ಶೀಘ್ರಕೋಪಿಯಾಗಬಾರದು. ಶೀಘ್ರಕೋಪಿ ಕೊನೆಗೆ ಕೆಲಸಕ್ಕೆ ಬಾರದ, ಕೋಪವನ್ನು ಸಹಿಸುವ ಜನರಿಂದ ಸುತ್ತು ವರಿಯಲ್ಪಡಬೇಕಾಗುವದಷ್ಟೇ. ಕೋಪಗೊಳ್ಳುವವನಿಂದ ಒಳ್ಳೆಯ ಜನರು ದೂರ ಸರಿಯುತ್ತಾರೆ, ಇಲ್ಲವೆ ಯಾವಾಗಲೂ ಹೋಗುತ್ತೇವೆಂದು ಹೆದರಿಸುತ್ತಿರುತ್ತಾರೆ. ಹೀಗೆ ಒಳ್ಳೆಯ ಜನ ದೂರ ಸರಿಯುವುದು ಆಡಳಿತಕ್ಕೆ ನಷ್ಟವೇ ಸರಿ.

ಯಾವುದೇ ಒಂದು ನಿರ್ಣಯ ಮಾಡಿದಾಗಲೂ ಯಾವ ಕೆಲಸವನ್ನಾದರೂ ಜಾರಿಗೆ ತಂದಾಗಲೂ, ತನ್ನ ಕೆಳವರ್ಗದ ನೌಕರರು ಅದರ ಯುಕ್ತಾಯುಕ್ತತೆಗಳನ್ನು ಅರಿತು, ಅದು ಜನತೆಯ ಸುಖಕ್ಕಾಗಿ ಎಂಬುದನ್ನು ಅರಿಯುವಂತೆ ಮಾಡು ವುದು ಆಡಳಿತಗಾರನ ಕರ್ತವ್ಯ. ಯಾವ ಕೆಲಸವಾದರೂ, ಎಲ್ಲಾ ಅಧಿಕಾರಿಗಳಲ್ಲೂ ಅದು ತನ್ನದೇ ಕೆಲಸವೆಂಬ ಮನೋ ಭಾವ ಬೆಳೆಯಬೇಕು. ಎಲ್ಲಾ ಅಧಿಕಾರಿಗಳೂ ಒಟ್ಟುಗೂಡಿ ಜನತೆಯ ಸಹಾಯದಿಂದ ದೇಶದ ಉನ್ನತಿಗೆ ದುಡಿಯಬೇಕು. ನೂರು ವರ್ಷಗಳ ಕೆಳಗೆ ಬ್ರಿಟನ್ನಿನ ಅಧಿಕಾರಿಗಳು ದಕ್ಷರಾಗಿರದೆ, ಕೆಲಸ ಮಾಡಲೂ ಬಾರದೆ, ಕೆಲವು ವೇಳೆ ನೀತಿಭ್ರಷ್ಟರಾಗಿಯೂ ಇರುತ್ತಿದ್ದರು. ಆದರೆ ಇಂದು ಬ್ರಿಟನ್ನಿನ ಅಧಿಕಾರಿಗಳು ದಕ್ಷ

ರಾಗಿ ಪ್ರಾಮಾಣಿಕರಾಗಿ ಆದರ್ಶಪ್ರಾಯರಾಗಿದ್ದಾರೆ. ನಮ್ಮ ಲ್ಲಿಯೂ ಕೂಡ ಆದರ್ಶ ಅಧಿಕಾರಿಗಳನ್ನು ತಯಾರಿಸಬಹುದು. ಆದರೆ ಪ್ರಜಾಸತ್ತೆಯೂ, ರಾಜಕೀಯವೂ, ಕೋಮುವಾರು ಭಾವನೆಗಳೂ ಇದಕ್ಕೆ ಅವಕಾಶ ಕೊಡಬೇಕು. ಲೋಕಸಭೆ, ಶಾಸನ ಸಭೆಗಳ ಅಧಿಕಾರವೇ ಪೂರ್ಣ ಅಧಿಕಾರವಾದರೂ, ರಾಜಕೀಯ ಪ್ರಭಾವ ಶಕ್ತಿಗಳು ಶಾಸನ ಸಭೆಗಳಲ್ಲಿ ಅಥವಾ ಹೊರಗೆ ಬಹಳವಾಗಿ ಅಧಿಕಾರ ಹೊಂದಿರಬಾರದು. ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ರಾಜಕೀಯದಲ್ಲಿ ನುರಿತವರು ಒಳ್ಳೆಯ ಆಡಳಿತಗಾರರಾಗುವರೆಂಬ ಭಾವನೆ ಇತ್ತು. ಆದರೆ ಪರಿಸ್ಥಿತಿ ಇಂದು ಬದಲಾಯಿಸಿದೆ. ರಾಜಕಾರಣಿಗಳು ಆಡಳಿತಗಾರರಾ ಗುವುದಕ್ಕೆ ಬದಲಾಗಿ ಇಂದು ಕೆಲವು ಆಡಳಿತಗಾರರೇ ರಾಜಕಾರ ಣಿಗಳಾಗುತ್ತಿದ್ದಾರೆ. ಇದು ಅಪಾಯಕಾರಿ.

ಸಾಮಾಜಿಕ ಆಡಳಿತ ಆದರ್ಶಗಳು ಖಾಸಗಿ ಆಡಳಿತ ವರ್ಗಕ್ಕೂ ಅನ್ವಯಿಸುತ್ತವೆ. ಯಾವ ಆಡಳಿತವೇ ಆಗಲಿ ಭದ್ರವಾದ ತಳಹದಿಯ ಮೇಲೆ ರೂಪುಗೊಳ್ಳಬೇಕು. ಆಡಳಿತ ತತ್ವಗಳಲ್ಲಿ ಅತಿ ಪ್ರಮುಖವಾದ ವಿಷಯ ನಡತೆ. ಆಡಳಿತಗಾ ರನು ರಾಷ್ಟ್ರಹಿತಪಾಲಕನಾಗಬೇಕು. ರಾಷ್ಟ್ರವನ್ನು ಸ್ವಾರ್ಥ ಕ್ಕಾಗಿ ಬಲಿಕೊಡಬಾರದು. ಒಟ್ಟಿನಲ್ಲಿ, ಆದರ್ಶ ಆಡಳಿತವು ದಕ್ಷತೆ, ಪ್ರಾಮಾಣಿಕತೆ, ಮಿತವ್ಯಯ, ಮೊದಲಾದ ಸದ್ಗುಣ ಗಳಿಂದ ಕೂಡಿರಬೇಕು. ಆಡಳಿತಗಾರನು ಇಂತಹ ಗುಣಗ ಳಿಂದ ಶೋಭಿಸಬೇಕು. ಹಾಗಾದರೆ ನಾಡಿನ ಕಲ್ಯಾಣವಾಗುವ ದರಲ್ಲಿ ಸಂದೇಹವಿಲ್ಲ.

## ಒಳ್ಳೆಯ ಸರಕಾರದಿಂದ ಒಳ್ಳೆಯ ಆಡಳಿತ

ಉಪದೇಶ ನೀಡುವದರಲ್ಲಿ ರಾಜಾಜಿಯವರು ಎತ್ತಿದ ಕೈ. ಆದರ್ಶ ಆಡಳಿತಗಾರರ ಬಗೆಗೆ ಅವರು ಆಡಿರುವ ಮಾತು ಮನನೀಯವಾಗಿವೆ. ಆದರೆ ಕೇವಲ ಒಳ್ಳೆಯ ಆಡಳಿತ ತಂತ್ರಗಳು, ಒಳ್ಳೆಯ ನೇಮಕ ಪದ್ಧತಿ, ಒಳ್ಳೆಯ ಸಂಬಳ, ಅಧಿಕಾರದ ಕೇಂದ್ರೀಕರಣ ಅಥವಾ ವಿಕೇಂದ್ರೀಕರಣಗಳೇ ಸಾಲವು. ಕೆಟ್ಟ ಸರಕಾರ ಕೆಟ್ಟ ಸಮಾಜದ ನಡುವೆ ಒಳ್ಳೆಯ ಆಡಳಿತವಿರಲಾರದು. ಆಡಳಿತವು ಸಮಾಜದ ಒಂದು ಭಾಗ. ಸರಕಾರವೂ ಕೂಡ ಅಷ್ಟೇ. ನೀತಿಗೆಟ್ಟ ಸಮಾಜ ಅಥವಾ ಸರಕಾರದಲ್ಲಿ ಒಳ್ಳೆ ಆಡಳಿತ ಮೂಡಲಾರದು. ಒಳ್ಳೆಯ ಸರಕಾರ ಹಾಗೂ ಆದರ್ಶ ಮಂತ್ರಿಮಂಡಲವಿದ್ದರೆ ಆಡಳಿತವು ಸುಧಾರಿಸಬಹುದು.

ಸರಕಾರದ ಮುಖ್ಯ ಅಂಗಗಳಾದ ಮಂತ್ರಿಗಳ ಮತ್ತು ಶಾಸನ ಸಭಾ ಸದಸ್ಯರ ನಡತೆ ಸಂಶಯಾತೀತವಾಗಿರಬೇಕು. ದೇಶಕ್ಕಾಗಿ ಪ್ರಾಮಾಣಿಕವಾಗಿ ದುಡಿಯುವ ಸಮರ್ಥ ಮಂತ್ರಿಗಳ ನಡೆ–ನುಡಿಗಳು ನೌಕರಶಾಹಿಯ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡಬಲ್ಲವು. ದೇಶಹಿತವನ್ನು ಬದಿಗಿರಿಸಿ ಸ್ವಂತ ಅಥವಾ ಸ್ವಜನ ಹಿತಕ್ಕಾಗಿ ಕೆಲಸ ಮಾಡುವ ರಾಜಕಾರಣಿಗಳಿಂದ ಅಧಿಕಾರಿಗಳ ನೀತಿಮತ್ತೆಯು ಸುಧಾರಿಸದು. ಅಧಿಕಾರದ ಅಮಲಿನಲ್ಲಿ ಪಕ್ಷಪಾತ, ದುಂಡುಗಾರಿಕೆ, ಲಂಚ ಮೊದಲಾದವುಗಳಲ್ಲಿ ಆಸಕ್ತಿ ವಹಿಸಿ ಜನಹಿತವನ್ನು ಮರೆಯುವ ಮಂತ್ರಿಗಳಿಂದ ಅಧಿಕಾರಿಗಳಲ್ಲಿ ಶಿಸ್ತು ಪತನವಾಗುತ್ತದೆ. ದಿನಬೆಳಗಾ

ದರೆ ಮಂತ್ರಿಯಾಗಬೇಕೆಂದು ಹುಚ್ಚು ಹಿಡಿದವರಂತೆ ವರ್ತಿಸುವ, ಸಾರ್ವಜನಿಕ ಹಿತವನ್ನು ಕಡೆಗಣಿಸುವ ಸ್ವಾರ್ಥಿ ಶಾಸನ ಸಭಾ ಸದಸ್ಯರಿಂದ ಆಡಳಿತದ ಮೇಲೆ ಕೆಟ್ಟ ಪರಿಣಾಮವಾಗುವದರಲ್ಲಿ ಸಂದೇಹವಿಲ್ಲ.

'ಸರಕಾರದಲ್ಲಿ ನೀತಿ' ವಿಷಯವಾಗಿ ಡೊಗ್ಲಾಸ್ ಎಂಬ ಅಮೇರಿಕೆಯ ಸೆನೆಟ್ ಸದಸ್ಯರು ಒಂದು ಹೊತ್ತಿಗೆಯನ್ನು ಬರೆದಿದ್ದಾರೆ.* ಅವರು ಆಡಳಿತದಲ್ಲಿ ನೀತಿ ಪತನ ಹೇಗಾಗುತ್ತದೆ ಎಂಬುದನ್ನು ಸ್ವಾರಸ್ಯವಾಗಿ ಚರ್ಚಿಸಿದ್ದಾರೆ. ಅಮೇರಿಕೆಯ ಆಡಳಿತಗಾರರು ಲಂಚ ಮೊದಲಾದ ಪ್ರಭಾವಗಳಿಗೆ ತುತ್ತಾಗಿ ವರ್ತಿಸುವುದನ್ನು ಖಂಡಿಸಿದ್ದಾರೆ. ಭಾರತದಲ್ಲಿ ಇತ್ತೀಚೆಗೆ ನಡೆದ ಮುಂಧ್ರಾ ಪ್ರಕರಣವು ಎಲ್ಲರ ಕಣ್ದೆರೆಯಿಸಿದೆ. ಎಂದರೆ ಆಡಳಿತದಲ್ಲಿರುವವರೆಲ್ಲರೂ ನೀತಿಗೆಟ್ಟವರೆಂದಲ್ಲ. ನೂರಕ್ಕೆ ಎಂಬತ್ತು ಅಥವಾ ತೊಂಬತ್ತು ಮಂದಿ ಪ್ರಾಮಾಣಿಕರು ಸಿಗುತ್ತಾರೆ. ಉಳಿದವರೂ ಕೂಡ ನಿಸ್ಪೃಹರಾಗುವಂತೆ ಎಚ್ಚರಿಕೆ ವಹಿಸಬೇಕು. ಸಾರ್ವಜನಿಕ ಸ್ಥಾನದಲ್ಲಿರುವವರು–ಮಂತ್ರಿಗಳಾಗಲಿ, ಶಾಸನ ಸಭಾ ಸದಸ್ಯರಾಗಲಿ,ಅಧಿಕಾರಿಗಳಾಗಲಿ–ಯಾವ ಸಂದರ್ಭದಲ್ಲೂ ಆಸಕ್ತ ವರ್ಗಗಳಿಂದ ಬೆಲೆಯುಳ್ಳ ಕಾಣಿಕೆ ಮತ್ತು ಸತ್ಕಾರಗಳನ್ನು ಸ್ವೀಕರಿಸಕೂಡದು. ಇಂಗ್ಲೆಂಡು ನೂರು ವರ್ಷಗಳ ಹಿಂದೆ ನೀತಿಗೆಟ್ಟ ಆಡಳಿತಗಾರರಿಂದ ತುಂಬಿತ್ತು. ಇಂದು ಇಂಗ್ಲೀಷ್

---

* Ethics in Government, Paul H. Douglas 1953, Harvard University Press.

ಆಡಳಿತದಲ್ಲಿ ಸ್ವಚ್ಛತೆಯಿದೆ. ಅಲ್ಲಿಯ ಸಾರ್ವಜನಿಕ ಜೀವನದಲ್ಲಿ ಉಚ್ಚ ಸಂಪ್ರದಾಯದ ನೀತಿಮಟ್ಟವಿದೆ.ಅಲ್ಲಿಯ ಚುನಾವಣೆಯ ಕಾಲದಲ್ಲಿ ಲಂಚವನ್ನಾಗಲಿ, ಆರೋಪ-ವೈಯಕ್ತಿಕ ನಿಂದೆಗಳ ರಭಸವನ್ನಾಗಲಿ ನಾವು ಕಾಣೆವು. ಇಂಗ್ಲೀಷರ ಸಾರ್ವಜನಿಕ ಜೀವನ ಮಟ್ಟ ಅಷ್ಟು ಉನ್ನತವಾಗಿದೆ. ಇದಕ್ಕೆ ವ್ಯಕ್ತಿಯ ಶೀಲವೇ ಮೂಲ. ದೇಶದ ಜನರು ನೀತಿಯ ಹೆದ್ದಾರಿಯಲ್ಲಿ ಹೋದರೆ ಎಲ್ಲರೂ ಅಸೂಯೆ ಪಡುವಂತಹ ಒಳ್ಳೆಯ ಆಡಳಿತ ವನ್ನು ಕಟ್ಟಲು ಸಾಧ್ಯವಿದೆ.

---

# ೪. ಆಡಳಿತ ಯಂತ್ರ

ಆಡಳಿತ ವ್ಯವಸ್ಥೆಯು ಸುಲಭವಲ್ಲ. ಲಕ್ಷಾಂತರ ನೌಕರರು ವಿವಿಧ ಇಲಾಖೆಗಳಲ್ಲಿ ಕೆಲಸ ಮಾಡುವ ಸರಕಾರಿ ಆಡಳಿತದ ಸಂಘಟನೆ ದೊಡ್ಡ ಸಮಸ್ಯೆ. ಈ ನೌಕರರು ಒಂದೇ ಕಡೆಯವರಲ್ಲ, ಒಂದೇ ವಂಶದವರಲ್ಲ, ಒಂದೇ ಸ್ವಭಾವದವರಲ್ಲ. ಒಂದೇ ಮನೆಯ ಜನರಲ್ಲಿ ಎಷ್ಟೋ ಸಲ ಸಹಕಾರವಿರುವದಿಲ್ಲ. ಹೀಗಿರುವಾಗ ಸರಕಾರಿ ಆಡಳಿತವನ್ನು ಹೇಗೆ ಸಂಘಟಿಸಿದರೆ ಸಾರ್ವಜನಿಕ ಕೆಲಸವು ಸುಸೂತ್ರವಾಗಿ ನಡೆದೀತು ಎಂಬುದು ಜಟಿಲವಾದ ಪ್ರಶ್ನೆಯೇ ಸರಿ. ಆಡಳಿತ ವ್ಯವಸ್ಥೆಯ ಕೆಲವು ಮೂಲ ಸೂತ್ರಗಳನ್ನಿಲ್ಲಿ ಉಲ್ಲೇಖಿಸಬಹುದು.

## ಆಡಳಿತದ ಏಣಿ

## ( Administrative hierarchy )

ಆಡಳಿತ ರಚನೆಯನ್ನು ಶರೀರದ ರಚನೆಗೆ ಹೋಲಿಸಬಹುದು. ಕೇಂದ್ರೀಯ ಆಡಳಿತ ಕಚೇರಿಯು ಆಡಳಿತದ ಮೆದುಳು. ಇಲಾಖೆಗಳು ಆಡಳಿತದ ಕೈಕಾಲುಗಳಿದ್ದಂತೆ.

ಆಡಳಿತ ಯಂತ್ರವು ಶರೀರ ಕ್ರಿಯೆಯಷ್ಟು ಕ್ರಮಬದ್ಧವಾಗಿ ನಡೆಯಲಾರದು ಸಾಧ್ಯವಾದ ಪ್ರಯತ್ನಗಳನ್ನು ಮಾಡಿ ಆಡಳಿತವು ಸುಗಮವಾಗಿ ನಡೆಯುವಂತೆ ವ್ಯವಸ್ಥೆ ಮಾಡು ವುದು ಅತ್ಯಗತ್ಯ. ಅಂತಹ ಪ್ರಯತ್ನಗಳಲ್ಲಿ ಆಡಳಿತದ ಏಣಿಯ ರಚನೆಯೂ ಒಂದಾಗಿದೆ. ಅಡಕಿಲಿನಲ್ಲಿ ಮಡಕೆ ಗಳನ್ನು ಒಂದರ ಮೇಲೊಂದಾಗಿ ಇರಿಸುವಂತೆ, ಏಣಿಯ ಮೆಟ್ಟಲುಗಳನ್ನು ಒಂದರ ಮೇಲೊಂದಾಗಿ ಜೋಡಿಸುವಂತೆ, ಆಡಳಿತದ ಪಿರಮಿಡ್ಡುಗಳನ್ನು ರಚಿಸಬೇಕು. ನೌಕರರ ಸಂಬಳ, ಅಂತಸ್ತು ಮೊದಲಾದ ಸಂಗತಿಗಳನ್ನು ಗಮನಿಸಿ ನೌಕರ ಶಾಹಿಯ ಕಟ್ಟಡವನ್ನು ನಿರ್ಮಿಸಬೇಕು. ವಿವಿಧ ದರ್ಜೆಯ ಅಧಿಕಾರಿಗಳ ಸ್ಥಾನಮಾನವನ್ನು ಗೊತ್ತುಪಡಿಸುವುದು ಅನಿ ವಾರ್ಯ. ಯಾರು ಯಾರಿಗೆ ಅಧೀನರಾಗಿ ವರ್ತಿಸಬೇಕು, ಹೊಣೆ ಮತ್ತು ಕರ್ತವ್ಯಗಳನ್ನು ಹೇಗೆ ಹಂಚಬೇಕು, ಆಡಳಿತ ತಂತ್ರಗಳು ಹೇಗಿರಬೇಕು, ಇವೇ ಮೊದಲಾದ ಸಂಗತಿಗಳನ್ನು ಪರಿಶೀಲಿಸಿ ಅಧಿಕಾರಿಗಳ ಹಂತಗಳನ್ನು ಸೂಚಿಸುವ ಆಡಳಿತದ ಏಣಿಯ ರಚನೆಯು ಆಡಳಿತ ಸಂಘಟನೆಯ ಪ್ರಥಮ ಸೂತ್ರ ವಾಗಿದೆ.

ಒಂದು ಇಲಾಖೆಯ ರಚನೆಯ ಬಗ್ಗೆ ಮೊದಲು ತಿಳಿದು ಕೊಂಡರೆ ಸಮಗ್ರ ಆಡಳಿತ ಸಂಘಟನೆಯ ವಿಷಯದಲ್ಲಿ ಸರಿ ಯಾದ ಕಲ್ಪನೆಯಾದೀತು. ಇಲ್ಲಿ ಕೊಟ್ಟಿರುವ ನಕ್ಷೆಯನ್ನು ನೋಡಿರಿ.

## ಇಲಾಖೆಯ ರಚನೆ

ಮಂತ್ರಿ (ರಾಜಕಾರಣಿ–ಆಡಳಿತಗಾರ)

— ಉಪಮಂತ್ರಿ ಇತ್ಯಾದಿ
(ರಾಜಕಾರಣಿ–ಆಡಳಿತದಾರ)

ಇಲಾಖೆಯ ಕಾರ್ಯದರ್ಶಿ (ಮಂತ್ರಿಯ ಸಲಹೆಗಾರ)




ಇಲಾಖೆಯ ಮುಖ್ಯಾಧಿಕಾರಿ
**(Head of the Department)**

ಸಹಾಯಕ ಅಧಿಕಾರಿ (Personal Assistant)

ಮುಖ್ಯ (ಕೇಂದ್ರ) ಕಚೇರಿಯ ಅಧಿಕಾರಿ ವರ್ಗ

ಜಿಲ್ಲಾ ಮಟ್ಟದ ಅಧಿಕಾರಿಗಳು ಮತ್ತು ಅವರ
ಸಹಾಯಕ ಸಿಬ್ಬಂದಿ

ಆಡಳಿತ ಇಲಾಖೆಗಳ ನಿರ್ಮಾಣವೆಂದರೆ ಶ್ರಮವಿಭಾಗ ಮಾಡಿದಂತೆ. ಯಾವ ಸೂತ್ರದ ಪ್ರಕಾರ ಇಲಾಖೆಗಳನ್ನು ಸಂಘಟಿಸಬೇಕು ಎಂಬುದು ಮುಖ್ಯ ಪ್ರಶ್ನೆಯಾಗಿದೆ.ಕೆಲಸದ ಸ್ವಭಾವ, ಮಿತವ್ಯಯ, ಹತೋಟಿ–ಈ ಮೂರು ಅಂಶಗಳನ್ನು ಸಾಮಾನ್ಯವಾಗಿ ಗಮನಿಸಿ ಇಲಾಖೆಗಳನ್ನು ರಚಿಸಬೇಕು,ರಾಜ್ಯದ ಉತ್ಪತ್ತಿಯನ್ನು ಗಮನಿಸಿ ಇಲಾಖೆಗಳ ಸಂಖ್ಯೆಯನ್ನು ನಿರ್ಧರಿಸಬೇಕು. ಇಲಾಖೆಗಳ ನಿರ್ಮಾಣವು ಕೇವಲ ಸೌಕರ್ಯಕ್ಕಾಗಿ. ಒಂದು ಇಲಾಖೆಗೂ ಇನ್ನೊಂದು ಇಲಾಖೆಗೂ ಯಾವ ಸಂಪರ್ಕ ಸಂಬಂಧವಿರಕೂಡದೆಂದಲ್ಲ. ಪ್ರತಿ ರಾಜ್ಯವು ಆಧುನಿಕ ಕಾಲದಲ್ಲಿ ಮೂರು ವಿಧದ ಚಟುವಟಿಕೆಯುಳ್ಳ ಇಲಾಖೆಗಳನ್ನು ಸ್ಥಾಪಿಸುವುದು ಅನಿವಾರ್ಯವಾಗಿದೆ.

(ಅ) **ಮೂಲ ಇಲಾಖೆಗಳು:** ಪ್ರತಿರಾಜ್ಯದ ಅಸ್ತಿತ್ವಕ್ಕೆ ಇವು ಬೇಕೇ ಬೇಕು. ರಾಷ್ಟ್ರೀಯ ಸಂರಕ್ಷಣೆ, ಹಣಕಾಸು, ವಿದೇಶಾಂಗ ನೀತಿ, ಗೃಹ ಮುಂತಾದ ಇಲಾಖೆಗಳಿಲ್ಲದೆ ರಾಜ್ಯದ ಆಡಳಿತ ನಡೆಯದು.

(ಆ) **ಸಮಾಜ ಕಲ್ಯಾಣದ ಇಲಾಖೆಗಳು :** ಶಿಕ್ಷಣ, ಆರೋಗ್ಯ, ಕೂಲಿಕಾರರ ಕಲ್ಯಾಣ, ಹಿಂದುಳಿದವರ ಹಿತ,ಒಂದು ದೇಶದ ಉತ್ಪತ್ತಿಯನ್ನವಲಂಬಿಸಿದೆ ಈ ಸಾಮಾಜಿಕ ಸೇವೆ. ಸರಕಾರದ ಐಚ್ಛಿಕ ಚಟುವಟಿಕೆಗಳೆಂದು ಇವುಗಳನ್ನು ಹೇಳಲಡ್ಡಿಯಿಲ್ಲ.

(ಇ) **ಸಂಪದಭಿವೃದ್ಧಿ ಇಲಾಖೆಗಳು :** ವಿದ್ಯುಚ್ಛಕ್ತಿಯ ಉತ್ಪಾದನೆ, ನೀರಾವರಿ ಯೋಜನೆ, ರಸ್ತೆ, ರೈಲು,

ಅಂಚೆ ಮತ್ತು ತಂತಿ ಮೊದಲಾದ ಸಂಪರ್ಕ–ಸಾರಿಗೆ ಸೌಕರ್ಯ ಗಳು, ಒಕ್ಕಲುತನ, ಉದ್ಯಮಗಳ ಅಭಿವೃದ್ಧಿ, ದೇಶದ ಸಂಪತ್ತನ್ನು ಹೆಚ್ಚಿಸಿ ಜೀವನದ ಮಟ್ಟವನ್ನು ಎತ್ತರಿಸಲು ಇಂದಿನ ಸರಕಾರವು ಕೆಲಸ ಮಾಡುತ್ತಿದೆ. ದೇಶದ ಅಭಿವೃದ್ಧಿಯನ್ನು ಕುರಿತು ಅಂದಾಜು ಮಾಡಲು ಇತ್ತೀಚೆಗೆ **ಯೋಜನಾ ಇಲಾಖೆಯು** ಮಾರ್ಪಟ್ಟಿದೆ. ಇವು ಸಾಂಪತ್ತಿಕ ಅಭಿವೃದ್ಧಿಗೆ ಸಂಬಂಧಿಸಿವೆ.

ಹೀಗೆ ಹಣಕಾಸಿನ ಸ್ಥಿತಿ ಸರಕಾರಿ ಕೆಲಸದ ಸ್ವಭಾವ, ಹತೋಟಿ ಮತ್ತು ಹೊಂದಾಣಿಕೆಗಳನ್ನು ಗಮನಿಸಿ ಇಲಾಖೆ ಗಳನ್ನು ನಿರ್ಮಿಸಬೇಕು. ಇಲಾಖೆಗಳು ಎಷ್ಟೇ ಇರಲಿ ಅವುಗಳ ಗುರಿ ಮಾತ್ರ ಒಂದೇ. ವಿವಿಧ ಇಲಾಖೆಗಳ ಕೇಂದ್ರ ಸೂತ್ರ ಮುಖ್ಯ ಕಾರ್ಯದರ್ಶಿಯ ಕೈಯಲ್ಲಿದೆ. ಪ್ರತಿ ಇಲಾಖೆಯ ಮುಖ್ಯಾಧಿಕಾರಿಯು ಈತನಿಗೆ ಅಧೀನನಾಗಿ ಕೆಲಸ ಮಾಡಬೇಕಾಗಿದೆ.

## ಇಲಾಖಾ ಮುಖ್ಯಾಧಿಕಾರಿಯ ಹೊಣೆ

ಇಲಾಖೆಯ ಮುಖ್ಯಾಧಿಕಾರಿಯ ಪಾತ್ರ ಮಹತ್ವದ್ದಾಗಿದೆ. ಮುಖ್ಯಾಧಿಕಾರಿಯು ಯೋಗ್ಯನೂ, ದಕ್ಷನೂ, ನಾಯಕನಲ್ಲಿ ಇರಬೇಕಾದ ಸಾಮರ್ಥ್ಯ ಮತ್ತು ಗುಣವುಳ್ಳವನೂ ಆಗಿದ್ದರೆ ಇಲಾಖೆಯ ಇತರ ನೌಕರರ ಮೇಲೆ ಒಳ್ಳೆಯ ಪರಿಣಾಮವಾಗುವುದು. ಮಂತ್ರಿ ಮತ್ತು ಇಲಾಖಾ ಕಾರ್ಯದರ್ಶಿಗಳು ಕೊಟ್ಟ ತೀರ್ಮಾನಗಳನ್ನು ಕಾರ್ಯಗತ ಮಾಡುವ ಹೊಣೆ

ಇಲಾಖೆಯ ತಲೆಯಾಳಿಗೆ ಸೇರಿದೆ. ಮುಖ್ಯಾಧಿಕಾರಿಗಳು ಶೀಘ್ರ ಕೋಪಿಗಳೂ, ಪಕ್ಷಪಾತಿಗಳೂ ಆದರೆ ಇಡೀ ಇಲಾಖೆಯ ಹೆಸರಿಗೆ ಕಳಂಕ ಬರಬಹುದು. ಇಲಾಖೆಯ ನೌಕರರ ವಿಶ್ವಾಸ ಮತ್ತು ಪ್ರೇಮುಗಳನ್ನು ಗಳಿಸಿ, ಅವರ ಹಿತೈಷಿಯಾಗಿ ಆತ ಕೆಲಸ ಮಾಡಬೇಕು. ಸರಕಾರಿ ನೌಕರರಿಂದ ಉತ್ತಮ ಸೇವೆಯಾಗುವಂತೆ ನೋಡಿಕೊಳ್ಳಬೇಕು. ಮುಖ್ಯಾಧಿಕಾರಿಯು ವಿಶಾಲ ಮನಸ್ಸುಳ್ಳ ನಾಯಕನಾಗಿ ನಡೆದುಕೊಳ್ಳಬೇಕು. ತಾನು ಮೇಲಧಿಕಾರಿ, ಸಾಹೇಬ ಎಂಬ ಮನೋಭಾವದಿಂದ ಕೂಡಿ ದರ್ಪವನ್ನು ನಡೆಸದೆ ಹಡಗಿನ ಕ್ಯಾಪ್ಟನ್ನನಂತೆ ಪಾತ್ರ ವಹಿಸಬೇಕು. ಆಡಳಿತದಲ್ಲಿ ಪ್ರತಿಯೊಬ್ಬ ಕರಣಿಕನ ಕೆಲಸವೂ ಮುಖ್ಯವಾದುದು. ಎಲ್ಲರ ಚಟುವಟಿಕೆಗಳಿಗೆ ಯೋಗ್ಯರೀತಿಯಲ್ಲಿ ಮಾರ್ಗದರ್ಶನ ಮಾಡಬೇಕು. ಇಲಾಖೆಯ ಎಲ್ಲ ವಿಭಾಗಗಳ ಕೆಲಸದಲ್ಲಿ ಒಂದು ಹೊಸ ಉತ್ಸಾಹವನ್ನು ಹುಟ್ಟಿಸಿ ಆಡಳಿತ ಚಕ್ರವು ಅತ್ಯಂತ ದಕ್ಷವಾಗಿ ತಿರುಗುವಂತೆ ನೋಡಿಕೊಳ್ಳುವುದು ಇಲಾಖಾ ಮುಖ್ಯಾಧಿಕಾರಿಯ ಹೊಣೆ. ತನ್ನ ಅಧೀನ ನೌಕರರ ಬಗ್ಗೆ ಸಹಾನುಭೂತಿಯಿಂದ ಕೂಡಿ ಅವರ ಸಹಕಾರವನ್ನು ಆಡಳಿತಕ್ಕೆ ದೊರಕಿಸುವುದು ಆತನ ಜವಾಬ್ದಾರಿಯಾಗಿದೆ. ಇಲಾಖೆಯ ಖ್ಯಾತಿ–ಅಪಖ್ಯಾತಿಗಳ ಶ್ರೇಯಸ್ಸು ಅಥವಾ ಕಳಂಕ ಇಲಾಖಾ ಮುಖ್ಯಾಧಿಕಾರಿಗೆ ಬರುತ್ತದೆ. ಇಲಾಖೆಯ ಕಾರಭಾರದ ಹೊಣೆ ಸಂಪೂರ್ಣ ಅವನದಾಗಿದೆ.

# ರಾಜಕಾರಣಿ–ಆಡಳಿತಗಾರರ ಪಾತ್ರ

ಆಡಳಿತ ಯಂತ್ರದ ಚಾಲಕರು ಚುನಾಯಿತ ಮಂತ್ರಿಗಳು. ಮಂತ್ರಿಗಳು ಸರಕಾರದ ಕಾರ್ಯಾಂಗ. ಅಮೇರಿಕದಲ್ಲಿ ಅಧ್ಯಕ್ಷನೂ, ಇಂಗ್ಲಂಡು ಭಾರತಗಳಲ್ಲಿ ಮಹಾ ಪ್ರಧಾನರೂ ಮತ್ತು ಅವರ ಸಹೋದ್ಯೋಗಿಗಳೂ ರಾಜಕಾರಣಿ–ಆಡಳಿತಗಾರರು. ಆಡಳಿತವನ್ನು ವೃತ್ತಿಯನ್ನಾಗಿ ಸ್ವೀಕರಿಸಿ ಇವರು ಅಧಿಕಾರವನ್ನು ನಡೆಸುವದಿಲ್ಲ. ರಾಜಕೀಯ ಮುಂದಾಳುಗಳಾಗಿ ಇವರು ಅಧಿಕಾರಸೂತ್ರಗಳನ್ನು ಹಿಡಿಯುತ್ತಾರೆ. ಶಾಶ್ವತ ಆಡಳಿತಾಧಿಕಾರಿಗಳ ಸಹಕಾರದಿಂದ ನೂತನ ಧೋರಣೆಗಳನ್ನೂ ನಿರ್ಧಾರಗಳನ್ನೂ ರೂಪಿಸಿ ಆಡಳಿತಕ್ಕೆ ಮಾರ್ಗದರ್ಶನ ಮಾಡುತ್ತಾರೆ. ಸರಕಾರ, ಮಂತ್ರಿಮಂಡಲ, ಕಾರ್ಯಾಂಗ ( Executive ) ಮೊದಲಾದ ಯಾವ ಹೆಸರಿನಿಂದ ಕರೆದರೂ ಅದು ಮಂತ್ರಿ–ಆಡಳಿತಗಾರರಿಗೇ ಅನ್ವಯಿಸುತ್ತದೆ. ಅವರಿಗೆ ಆಡಳಿತದ ಅನುಭವವಿರದಿರಬಹುದು. ಅವರು ಜನರ ಅಪೇಕ್ಷೆಗಳನ್ನು ಚೆನ್ನಾಗಿ ಬಲ್ಲವರಾದುದರಿಂದ ಆ ಪ್ರಕಾರ ಆಡಳಿತ ಧೋರಣೆಗಳನ್ನು ರೂಪಿಸುತ್ತಾರೆ. ಅವರು ಕಸಬುದಾರ ಆಡಳಿತಗಾರರಾಗಿರದಿರಬಹುದು. ಆದರೂ ಆಡಳಿತಕ್ಕೆ ಹೊಸ ದೃಷ್ಟಿಯನ್ನು ಕೊಡುವ ಶಕ್ತಿ ಅವರಲ್ಲಿದೆ.

ಉದಾರ ಧೋರಣೆಗಳುಳ್ಳ ದಕ್ಷ ಮತ್ತು ಪ್ರಾಮಾಣಿಕ ಮುಂದಾಳುಗಳ ಮಾರ್ಗದರ್ಶನವು ಆಡಳಿತಕ್ಕೆ ದೊರಕಿದರೆ ಆಡಳಿತ ಯಂತ್ರವು ವೇಗದಿಂದ ಚಲಿಸಬಹುದು. ಅಧಿಕಾ–

ರೇತರ ಮಂತ್ರಿಗಳ ವ್ಯಕ್ತಿತ್ವದಿಂದ ಆಡಳಿತಕ್ಕೆ ಬಹು ರೀತಿಯಿಂದ ಸಹಾಯವಾಗಬಹುದು. ರಾಜಕೀಯ ಪಕ್ಷದ ಐಕಮತ್ಯವನ್ನು ಉಳಿಸಿಕೊಂಡು, ನೂತನ ಧೋರಣೆಗಳನ್ನು ಹಮ್ಮಿ ದೇಶದ ಪ್ರಜೆಗಳ ಗುಣಗಾನಕ್ಕೆ ಪಾತ್ರವಾಗುವ ಯೋಗ್ಯತೆಯುಳ್ಳ ನಾಯಕರು ದೊರಕುವುದು ವಿರಳ. ಇಂಗ್ಲಂಡಿನಲ್ಲಿ ಅಂತಹ ನಾಯಕರು ಹಲವಾರು ಮಂದಿ ದೊರಕುತ್ತಾರೆ. ಚರ್ಚಿಲ್, ಆ್ಯಟ್ಲೀಯವರ ಹೆಸರುಗಳನ್ನು ಕೇಳದವರಾರು ? ಅಮೇರಿಕದ ರೂಜವೆಲ್ಟರ, ರಷ್ಯಾದ ಸ್ಟಾಲಿನ್ನರ ಹೆಸರುಗಳು ಎಲ್ಲರ ಸ್ಮರಣೆಯಲ್ಲಿವೆ. ಭಾರತದಲ್ಲಿ ಮಹಾತ್ಮಾ ಗಾಂಧಿ ಮತ್ತು ನೆಹರು ಅವರ ಹೆಸರುಗಳು ಮನೆಮಾತಾಗಿ ಹೋಗಿವೆ. ಪರಿಪಕ್ವ ರಾಜಕೀಯ ಮುಂದಾಳುತನ ಆಡಳಿತಕ್ಕೆ ನವಚೇತನವನ್ನು ತಂದುಕೊಡಬಲ್ಲದು. ಈ ಮಾತನ್ನು ಆ್ಯಟ್ಲೀಯವರ ನಿದರ್ಶನವನ್ನು ತೆಗೆದುಕೊಂಡು ಸಮರ್ಥಿಸಬಹುದು. ಆ್ಯಟ್ಲೀಯವರು ಲೇಬರ್ ಪಕ್ಷದಲ್ಲಿ ವಯಸ್ಸಿನಿಂದ ಹಿರಿಯರಲ್ಲೊಬ್ಬರಾಗಿದ್ದರೂ ಎಲ್ಲರಿಗಿಂತಲೂ ಪ್ರತಿಭಾಶಾಲಿಗಳಾಗಿರಲಿಲ್ಲ. ಇವರಿಗಿಂತ ಬುದ್ಧಿವಂತರು ಲೇಬರ್ ಪಕ್ಷದಲ್ಲಿ ಇದ್ದರು. ಆದರೆ ಎಲ್ಲ ಅಭಿಪ್ರಾಯಗಳ ಜನರನ್ನು ಹೊಂದಿಸಿಕೊಂಡು ಹೋಗುವ ಗುಣ ಆ್ಯಟ್ಲೀಯವರಲ್ಲಿತ್ತು. ಆದುದರಿಂದ ಅವರ ನಾಯಕತ್ವವನ್ನು ಎಲ್ಲರೂ ಒಪ್ಪಿದರು. ಆ್ಯಟ್ಲೀಯವರ ಮುಖಂಡತ್ವದಲ್ಲಿ ಕೂಲಿಕಾರ ಸರಕಾರವು ಇಂಗ್ಲೆಂಡಿನಲ್ಲಿ ಅನೇಕ ಹೊಸ ಹೆಜ್ಜೆಗಳನ್ನಿಟ್ಟದ್ದು ಇತಿಹಾಸದ ಮಾತಾಗಿದೆ. ಪ್ರಾಮಾಣಿಕ ಮತ್ತು ವಿಶಾಲ ಮನಸ್ಸಿನ ರಾಜಕೀಯ ಮುಂದಾಳುಗಳು ಮಂತ್ರಿ

ಗಳಾಗಿ ಅಧಿಕಾರ ಸೂತ್ರ ಹಿಡಿಯುವುದಾದರೆ ಆಡಳಿತಕ್ಕೆ ಬಹಳ ಉಪಯೋಗವಾಗಬಹುದು.

ರಾಜಕೀಯ ಆಡಳಿತಗಾರರ ಚಾಲಕತ್ವದಲ್ಲಿ ಆಡಳಿತವು ಸಮರ್ಥವಾಗಿ ಹಾಗೂ ಯಶಸ್ವಿಯಾಗಿ ನಡೆಯಬೇಕು. ಕೇಂದ್ರದ ಸಚಿವಾಲಯದ ಮಟ್ಟದಲ್ಲಾಗಲಿ ರಾಜ್ಯ ಮಟ್ಟದಲಾಗಲಿ ಜಿಲ್ಲಾ ಮಟ್ಟದಲ್ಲಾಗಲಿ ಆಡಳಿತವನ್ನು ಸರಿಯಾದ ತಳಹದಿಯ ಮೇಲೆ ಸಂಯೋಜಿಸಬೇಕು. ಕಾಲಕಾಲಕ್ಕೆ ಆಡಳಿತದ ಪುನರ್ಘಟನೆಯಾಗಿ ಆಡಳಿತವು ಜನರಿಗೆ ಪ್ರಯೋಜನಕರವೆನಿಸಬೇಕು. ಪ್ರಜಾ ಪ್ರಭುತ್ವದಲ್ಲಿ ಪ್ರಜೆಗಳು ಆಡಳಿತದೊಡನೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸಹಕರಿಸಬೇಕು. ಸಲಹಾ ಮಂಡಳಿಯ ಮೂಲಕವೂ, ಅಧಿಕಾರೇತರ ಸ್ಥಾನಗಳನ್ನು ವಹಿಸುವುದರ ಮೂಲಕವೂ, ನಿಯಮಗಳನ್ನು ಪಾಲಿಸುವುದರ ಮೂಲಕವೂ ಪ್ರಜೆಗಳು ಆಡಳಿತಕ್ಕೆ ನೆರವಾಗಬಹುದಾಗಿದೆ.

## ನೌಕರರ ನೇಮಕ ಮತ್ತು ಅವರ ಹಿತರಕ್ಷಣೆ

ಮಂತ್ರಿಗಳು ಶಾಶ್ವತವಾಗಿ ಅಧಿಕಾರದಲ್ಲಿರುವದಿಲ್ಲ. ಅವರು ಬರುತ್ತಾರೆ, ಹೋಗುತ್ತಾರೆ. ಆದರೆ ಸಿವಿಲ್ ಸರ್ವಿಸಿನ ಸದಸ್ಯರಾದ ನೌಕರರು ಮುಖ್ಯವಾಗಿ ಕಂಬಗಳಂತೆ ಹೆಚ್ಚಿನ ಭಾರವನ್ನು ಹೊರಬೇಕು. ಅವರು ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಕೆಲಸ ಮಾಡದಿದ್ದರೆ ಆಡಳಿತದ ಮಟ್ಟ ಇಳಿಯುತ್ತದೆ. ಸರಕಾರಿ ನೌಕರರು ತೃಪ್ತಿಯಿಂದ ಸೇವೆಯನ್ನು ಮಾಡವಂತಾಗಲು ಕೆಲವು

ಮಾರ್ಪಾಟುಗಳು ಅಗತ್ಯ. ಅವರ ನೇಮಕ, ಬಡ್ತಿ ಮೊದಲಾದ ವಿಷಯಗಳನ್ನು ಲೋಕಸೇವಾ ಆಯೋಗದಂತಹ ನಂಬಿಗಸ್ತ ಸಂಸ್ಥೆಯ ಮೂಲಕ ನಡೆಸಬೇಕು. ಅವರ ಸಂಬಳಸಾರಿಗೆಗಳು ತೃಪ್ತಿಕರವಾಗಿರಬೇಕು. ಯೋಗ್ಯ ಜನರು ಯೋಗ್ಯಸ್ಥಾನಗಳಲ್ಲಿ ಕೆಲಸ ಮಾಡಲು ಅವಕಾಶಗಳಿರಬೇಕು. ಸರಕಾರಿ ಅಧಿಕಾರಿಗಳಿಗೆ ಕೆಲವು ರಕ್ಷಣೆಗಳಿರಬೇಕು. ಅಧಿಕಾರಿಗಳ ನೀತಿಮತ್ತೆ ಮತ್ತು ದಕ್ಷತೆಗಳಿಗೆ ಧಕ್ಕೆ ಬಾರದಂತೆ ಸರಕಾರದವರು ಮುಂಜಾಗ್ರತೆ ವಹಿಸಬೇಕು. ಸಾಮಾನ್ಯವಾಗಿ ಸರಕಾರಿ ನೌಕರರು ಮತ್ತು ಪ್ರಜೆಗಳಲ್ಲಿ ಮೂರು ದಿಕ್ಕಿನಿಂದ ಘರ್ಷಣೆ ಸಂಭವಿಸುವುದು ಸ್ವಾಭಾವಿಕ. ನೌಕರರು ಸಗಕಾರವು ತಮಗೆ ಹೆಚ್ಚು ಸಂಬಳ ಮತ್ತು ಹೆಚ್ಚು ಸವಲತ್ತುಗಳನ್ನು ಒದಗಿಸಬೇಕೆಂದು ಬೇಡು ತ್ತಾರೆ. ಸರಕಾರವು ನೌಕರರಿಂದ ಹೆಚ್ಚಿನ ಶ್ರಮವನ್ನು ಬಯು ಸುತ್ತದೆ. ನೌಕಗರ ಸಂಬಳ ಸಾರಿಗೆ ಏರಿದರೆ ಪ್ರಜೆಗಳ ಮೇಲೆ ತೆರಿಗೆಯ ಹೊರೆ ಮತ್ತಷ್ಟು ಭಾರವಾಗುತ್ತದೆ. ಈ ವಿಷಚಕ್ರ ವನ್ನು ಒಡೆಯುವುದು ಕಷ್ಟದ ಕೆಲಸ. ಆದರೆ ಎಲ್ಲಿ ಅಧಿಕಾರಿ ಗಳು ಅತೃಪ್ತರಾಗಿರುವದಿಲ್ಲವೋ ಅಲ್ಲಿ ಆಡಳಿತ ಯಂತ್ರವು ಚೆನ್ನಾಗಿ ನಡೆಯುತ್ತದೆ ಎಂಬ ಮಾತು ನಿರ್ವಿವಾದ. ಈ ಅತೃಪ್ತಿ ಯನ್ನು ಆದಷ್ಟು ಇಲ್ಲದಂತೆ ಮಾಡುವುದು ಆಡಳಿತದಲ್ಲಿ ದಕ್ಷತೆ ಯನ್ನು ಅಧಿಕಗೊಳಿಸುತ್ತದೆ.

ಆಡಳಿತವನ್ನು ಭದ್ರವಾದ ತಳಹದಿಯ ಮೇಲೆ ಕಟ್ಟಬೇಕಾ ದರೆ ಅನುಸರಿಸಬೇಕಾದ ಕೆಲವು ಮೂಲ ಸೂತ್ರಗಳನ್ನು ಅಮೇರಿ

ಕದ ಸಂಸ್ಥೆಯೊಂದು ಪ್ರಕಟಪಡಿಸಿದೆ. ಅವುಗಳನ್ನು ಇಲ್ಲಿ ಎತ್ತಿ ಕೊಡಲಾಗಿದೆ.*

೧ ಪ್ರತಿಯೊಬ್ಬ ಕಾರ್ಯನಿರ್ವಾಹಕ ವ್ಯಕ್ತಿಯ ಹೊಣೆಗಳನ್ನು ಸ್ಪಷ್ಟವಾಗಿ ತಿಳಿಸಿಬಿಡಬೇಕು.

೨ ಬರೀ ಹೊಣೆಗಳನ್ನು ಮಾತ್ರ ತಲೆಗೆ ಕಟ್ಟಿದರೆ ಆಗಲಿಲ್ಲ, ಜೊತೆಗೆ ಅಧಿಕಾರವನ್ನೂ ಕೊಡಬೇಕು.

೩ ಒಮ್ಮೆ ಹೊಣೆ ಮತ್ತು ಅಧಿಕಾರಗಳನ್ನು ಹಂಚಿದ ಮೇಲೆ ಸಂಬಂಧಪಟ್ಟವರನ್ನು ವಿಚಾರಿಸದೆ ಬದಲಾಯಿಸಬಾರದು.

೪ ಕಾರ್ಯಾಂಗದ ಮುಖ್ಯಾಧಿಕಾರಿಯಾಗಲಿ ಇತರ ನೌಕರನಾಗಲಿ ತನ್ನ ಆಡಳಿತ ಘಟಕದಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿಯ ಆಜ್ಞೆಗಳನ್ನು ವಿಚಾರಿಸದೆ ಪರಿಪಾಲಿಸುವಂತಿರಬಾರದು.

೫ ಹೊಣೆಯುಳ್ಳ ಕಾರ್ಯನಿರ್ವಾಹಕ ಅಧಿಕಾರಿಯನ್ನು ಮೂಲೆಗೊತ್ತಿ ಆತನ ಕೆಳಗಿನ ನೌಕರರಿಗೆ ಅಜ್ಞೆಗಳನ್ನು ಮಾಡಬಾರದು.

೬ ಕೆಳ ನೌಕರರನ್ನು ಬಹಿರಂಗವಾಗಿ ಟೀಕಿಸಬಾರದು. ಸಾಧ್ಯವಿದ್ದಮಟ್ಟಿಗೆ ಖಾಸಗಿಯಾಗಿ ಅವರ ದೋಷಗಳನ್ನು ಅವರಿಗೆ ತಿಳಿಸಬೇಕು.

---

* Public Administrative Review 1943 Vol. 3, P. 80.

೭ ಅಧಿಕಾರ ಅಥವಾ ಹೊಣೆಗಳ ವಿಷಯದಲ್ಲಿ ಅಧಿಕಾರಿಗಳಲ್ಲಿ ಸಂಶಯ ಮತ್ತು ಭಿನ್ನಾಭಿಪ್ರಾಯ ತಲೆದೋರಿದಾಗ ಕೂಡಲೆ ನಿರ್ಣಯಗಳನ್ನು ಕೊಡಬೇಕು.

೮ ಬಡ್ತಿ, ಶಿಸ್ತಿನ ಕ್ರಮಗಳನ್ನು ಕೈಗೊಂಡಾಗ ಯಾವಾಗಲೂ ಮೇಲಧಿಕಾರಿಯ ಸಮ್ಮತಿಯನ್ನು ಪಡೆಯಬೇಕು.

೯ ಒಬ್ಬ ಅಧಿಕಾರಿಗೆ ಇನ್ನೊಬ್ಬ ಸಹಾಯಕನಾಗಿ ಕೆಲಸ ಮಾಡುವಾಗ ಟೀಕೆಗಳನ್ನು ಮಾಡಬಾರದು.

೧೦ ಅಧಿಕಾರಿಗಳ ಕಾರ್ಯನಿರ್ವಹಣೆಯನ್ನು ಪರೀಕ್ಷೆಮಾಡಿ ಸಲಹೆ ನೀಡಲು ಸಹಾಯ ಸಲಕರಣೆಗಳನ್ನು ಕೊಡಬೇಕು.

# ೫. ಆಡಳಿತದ ಕಡಿವಾಣಗಳು

ದೋಷಿಗೆ ತಕ್ಕ ದಂಡನೆಯು ಮಾಳ್ಪದು
ಮಾಡದುಪೇಕ್ಷಿಸಿದೊಡಾ
ದೋಷಿ ಬಳಿಕ್ಕೆ ಧಾರುಣಿಯೊಳಂಕುಶ
ಮಿಲ್ಲದ ಹಸ್ತಿಯಂತೆ ನಿ ।
ರ್ದೋಷಿಗಳಂ ಮದಾಂಧಗುಣದಿಂ ತುಳಿಗುಂ
ತುಳಿದಂದು ದೇಶಮುಂ
ದೋಷದೊಳೊಂದಿ ಪೋಕುಮದದಿಂದಮೆ
ಪೆರ್ಚಿದರ್ಗಿಕ್ಕೆಯುಗ್ನಿಯಂ ॥

—**ದುರ್ಗಸಿಂಹ** (ಪಂಚತಂತ್ರ)
ಕ್ರಿ. ಶ. ೧೦೩೦

ಅಧಿಕಾರದಲ್ಲಿರುವವರು ಅಂಕೆ–ಆಜ್ಞೆಗಳಿಗೊಳಗಾಗಿ ನಡೆಯದಿದ್ದರೆ ಎಂತಹ ಅನರ್ಥ–ಅನಾಹುತಗಳು ಸಂಭವಿಸಬಲ್ಲವು ಎಂಬುದನ್ನು ನಮ್ಮ ಪೂರ್ವಿಕರು ಅರಿತಿದ್ದರು. ಪ್ರಜಾಸೇವೆಯ ಆದರ್ಶವನ್ನು ಬಿಟ್ಟುಕೊಟ್ಟು ದುರ್ಮಾರ್ಗದಲ್ಲಿ ನಡೆವ ರಾಜರನ್ನು ಭಾರತೀಯ ವಿಚಾರವಂತರು ಖಂಡಿಸದೆ ಬಿಟ್ಟಿಲ್ಲ. ಪಟ್ಟಣಗಳನ್ನೂ ಕೋಟೆಗಳನ್ನೂ ಬಲಪಡಿಸದೆ, ಪ್ರಜೆಗಳ ಕಷ್ಟವನ್ನು ಲಕ್ಷಿಸದೆ, ಎಲ್ಲರೂ ತನ್ನಲ್ಲಿ ವಿಶ್ವಾಸವುಳ್ಳವರೆಂದು ನಂಬಿ, ತನ್ನ

ಆದಾಯ ವೆಚ್ಚಗಳನ್ನು ವಿಚಾರ ಮಾಡದೆ, ಬೇಕಾದ ಹಾಗೆ ತಿಂದು, ಮಿತಿಮೀರಿ ನಿದ್ದೆ ಮಾಡುತ್ತ ಯಾವಾಗಲೂ ವಿಷಯಾ ಸಕ್ತನಾಗಿರುವವನು ಸೊಕ್ಕಿದ ಕೋಣನೇ ಹೊರತು ದೊರೆಯಲ್ಲ ವೆಂದು ೧೦ ನೇ ಅಥವಾ ೧೧ ನೇ ಶತಮಾನದಲ್ಲಿ ಜೀವಿಸಿದ್ದ ನೆಂದು ಹೇಳಲ್ಪಡುವ ಸೋಮೇಶ್ವರ ಕವಿಯು ತನ್ನ ಶತಕದಲ್ಲಿ ಹೇಳಿರುತ್ತಾನೆ.* ಇದೇ ಕವಿಯು ಮಂತ್ರಿಯು ಬಹಳ ಗುಣ ಶಾಲಿಯೂ, ಸತ್ಯಸಂಧನೂ, ಲಂಚಕ್ಕೆ ಕೈನೀಡದವನೂ ಆಗಿರ ಬೇಕೆಂದೂ, ಲಂಚವನ್ನು ತೆಗೆದುಕೊಳ್ಳುವ ಮತ್ತು ಯಾರೂ ಕಾಣದಂತೆ ರಾಜಾದಾಯವನ್ನು ತಾನೇ ತಿಂದುಹಾಕುವ ಗುಮಾ ಸ್ತನು ಹೆಗ್ಗಣಕ್ಕೆ ಸಮಾನನೆಂದೂ ಅಭಿಪ್ರಾಯಪಟ್ಟಿದ್ದಾನೆ.

ಭಾರತೀಯ ರಾಜನೀತಿಯಲ್ಲಿ ದುರಾಡಳಿತ ಮಾಡುವವ ರನ್ನು ಮದಿಸಿದ ಆನೆಗೆ ಹೋಲಿಸಿದ್ದಾರೆ. ಸೊಕ್ಕಿದ ಕೋಣ ಅಥವಾ ಮದಿಸಿದ ಆನೆಗೆ ಅಂಕುಶ ಪ್ರಯೋಗ ಮಾಡಿಯೇ ಹಿಡಿತದಲ್ಲಿಡುವಂತೆ ಆಡಳಿತದಲ್ಲಿ ಹತೋಟಿ ಮತ್ತು

---

* ಪುರದುರ್ಗಂಗಳ ಬಲ್ಮೆ ಮಾಡದೆ ಪ್ರಜಾಕ್ಷೋಭಂಗಳಂ ನೋಡದೆ ।
ಲ್ಲರು ವಿಶ್ವಾಸಿಗಳೆಂದು ನಂಬಿ ಬಹುದಂ ಪೋದಪ್ಪುದಂ ಕಾಣದಾ ॥
ತುರದಿಂದುಂಡತಿ ನಿದ್ರೆಗೆಯ್ದು ಮದನಂಗಾಳಾಗಿಹಂ ಲೋಕದೊಳ್ ।
ದೊರೆಯೇ ಸೊಕ್ಕಿದ ಕೋಣನೈ ಹರಹರಾ ಶ್ರೀಚೆನ್ನ ಸೋಮೇಶ್ವರಾ ॥

ಶಿಕ್ಷೆಗಳಿಲ್ಲದಿದ್ದರೆ ಆಡಳಿತವು ಹುಚ್ಚು ಕುದುರೆಯಂತೆ ಓಡಲಾರಂಭಿಸುವುದು. ಪಾಶ್ಚಾತ್ಯ ರಾಜಕೀಯ ಶಾಸ್ತ್ರಕಾರರು ಕೂಡ ಅಧಿಕಾರವು ಮನುಷ್ಯನನ್ನು ಕೆಡಿಸುವ ಸಂಭವವಿರುತ್ತದೆಯಾದ್ದರಿಂದ ಅಧಿಕಾರವನ್ನು ಚಲಾಯಿಸುವವರ ಮೇಲೆ ಕಾವಲು ಮತ್ತು ಮೇಲ್ವಿಚಾರಣೆಗಳಿರಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ. ಒಳ್ಳೆಯ ಆಡಳಿತ ಬೇಕಾದರೆ ಕೆಲವು ಮುಂಜಾಗ್ರತೆಗಳನ್ನು ವಹಿಸಬೇಕು. ಸರಕಾರಿ ಆಡಳಿತವು ಸರ್ವಜನರಿಗೂ ಸಂಬಂಧಿಸಿದುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತವನ್ನು ಅಂಕೆ-ಆಜ್ಞೆಗಳಿಗೊಳಪಡಿಸುವುದು ಅತ್ಯಾವಶ್ಯಕ. ಹೊಣೆಗಾರ ಆಡಳಿತದ ಈ ಪ್ರಜಾಯುಗದಲ್ಲಿ ಆಡಳಿತವನ್ನು ನಿಯಂತ್ರಿಸುವ ಅನೇಕ ವಿಧಾನಗಳನ್ನು ಅನುಸರಿಸುವ ಪರಿಪಾಠ ಬೆಳೆದಿದೆ. ಆಡಳಿತ ನಡೆಸುವವರೆಲ್ಲರೂ ಸಂಶಯಾಸ್ಪದ ನಡವಳಿಕೆಯುವರು ಎಂದು ಯಾರೂ ಭಾವಿಸಬಾರದು. ಆಡಳಿತ ಮಾಡುವಾಗ ಅಧಿಕಾರವನ್ನು ದುರುಪಯೋಗಿಸಲೂ, ಸಾರ್ವಜನಿಕ ಹಣವನ್ನು ಅಪವ್ಯಯ ಮಾಡಲೂ ಬೇಕಾದಷ್ಟು ಸನ್ನಿವೇಶಗಳಿವೆ. ಈ ದೃಷ್ಟಿಯಿಂದಲೂ ಆಡಳಿತದಲ್ಲಿ ದಕ್ಷತೆ ಮತ್ತು ನೀತಿಮತ್ತೆಯ ಅಭಾವ ಉಂಟಾಗದಿರಲೆಂಬ ಸದುದ್ದೇಶದಿಂದಲೂ ಆಡಳಿತಕ್ಕೆ ನಾನಾ ಬಗೆಯ ಕಡಿವಾಣಗಳನ್ನು ಹಾಕುವ ಸಂಪ್ರದಾಯ ಬೆಳೆದುಬಂದಿದೆ.

ಆಡಳಿತದ ಹತೋಟಿಗಳನ್ನು ಮುಖ್ಯವಾಗಿ ನಾಲ್ಕು ವಿಧವಾಗಿ ವಿಂಗಡಿಸಬಹುದು. (೧) ಮಂತ್ರಿಮಂಡಲ (ಕಾರ್ಯಾಂಗ) ದಿಂದ ಹತೋಟಿ. (೨) ವಿಧಾನಮಂಡಲ (ಶಾಸನಾಂಗ)

ದಿಂದ ಹತೋಟಿ (೩) ನ್ಯಾಯಾಂಗದಿಂದ ಹತೋಟಿ ಮತ್ತು (೪) ಸಾರ್ವಜನಿಕರಿಂದ ಹತೋಟಿ.

## (೧) ಮಂತ್ರಿಗಳು ಹೇಗೆ ಆಡಳಿತವನ್ನು ಅಂಕೆಯಲ್ಲಿಡಬಲ್ಲರು ?

ಪಾರ್ಲಿಮೆಂಟರಿ ಪ್ರಜಾಸತ್ತೆಯಲ್ಲಿ ಪ್ರತಿಯೊಬ್ಬ ಮಂತ್ರಿಯೂ ತನ್ನ ಇಲಾಖೆಯ ಆಡಳಿತವು ದಕ್ಷವಾಗಿ ನಡೆಯುವಂತೆ ನೋಡಿಕೊಳ್ಳಬೇಕಾಗಿದೆ. ಆಡಳಿತ ನೀತಿಗಳನ್ನು ನಿರ್ಧರಿಸುವುದರ ಮೂಲಕವೂ, ಹಣವನ್ನು ಮಂಜೂರು ಮಾಡುವುದರ ಮೂಲಕವೂ, ಮಂತ್ರಿಗಳು ತಮ್ಮ ಇಲಾಖೆಯನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬಹುದು. ಇಲಾಖೆಯಲ್ಲಿ ಲೋಪದೋಷಗಳು ಸಂಭವಿಸಿದರೆ ಆ ಇಲಾಖೆಯ ಆಡಳಿತದ ಪೂರ್ಣ ಜವಾಬ್ದಾರಿ ಮಂತ್ರಿಯ ಮೇಲೆ ಇರುತ್ತದೆ. ಆದ್ದರಿಂದ ಮಂತ್ರಿಯು ತನ್ನ ಇಲಾಖೆಯು ಟೀಕೆಗಳಿಗೊಳಗಾಗದ ರೀತಿಯಲ್ಲಿ ಕೆಲಸ ಮಾಡುವಂತೆ ನೋಡಿಕೊಳ್ಳಬೇಕು. ಇಲಾಖೆಯ ಆಡಳಿತ ಹದಗೆಟ್ಟಾಗ, ತನ್ನ ಇಲಾಖೆಯ ಅಧಿಕಾರಿಗಳಿಂದ ಪ್ರಮಾದಗಳಾದಾಗ ಮಂತ್ರಿಗಳು ಅಧಿಕಾರತ್ಯಾಗ ಮಾಡುವ ಪ್ರಸಂಗ ಬರಬಹುದು. ೧೯೫೮ರಲ್ಲಿ ಭಾರತ ಸರಕಾರದ ಹಣಕಾಸಿನ ಇಲಾಖೆಯಲ್ಲಿ ಮುಂಧ್ರಾ ಪ್ರಕರಣವು ಸಂಭವಿಸಿದಾಗ ಅರ್ಥಸಚಿವರು ರಾಜಿನಾಮೆ ಕೊಡಬೇಕಾಯಿತು. ತಮ್ಮ ಇಲಾಖೆಯ ಆಡಳಿತಕ್ಕೆ ಒಳ್ಳೆಯ ಹೆಸರೇ ಬರಲಿ ಕೆಟ್ಟ ಹೆಸರೇ ಬರಲಿ, ತಾವೇ ಹೊಣೆಗಾರರಾದುದರಿಂದ ಮಂತ್ರಿಗಳು ಜಾಗರೂಕತೆಯಿಂದ ಆದನ್ನು ನಡೆಸಬೇಕಾಗುತ್ತದೆ.

ಸರಕಾರಿ ಧೋರಣೆಗಳನ್ನು ರೂಪಿಸುವುದು ಕೇವಲ ರಾಜಕೀಯ ಮಾರ್ಗದರ್ಶನ. ಅವುಗಳು ಎಷ್ಟರ ಮಟ್ಟಿಗೆ ಕಾರ್ಯಗತವಾಗುತ್ತವೆ ಎಂಬುದನ್ನು ನಿರೀಕ್ಷಿಸುವುದು ಆಡಳಿತದ ಕೆಲಸ. ರಾಜಕಾರಣಿ ಆಡಳಿತಗಾರರು ತಮ್ಮ ಇಲಾಖೆಗಳ ಆಡಳಿತವನ್ನು ದಕ್ಷವಾಗಿ ನಿರ್ವಹಿಸಬೇಕು. ದಕ್ಷ ಅಧಿಕಾರಿಗಳಿಗೆ ಉತ್ತೇಜನ ಕೊಟ್ಟು ಇಲಾಖೆಯಲ್ಲಿ ನೀತಿಮತ್ತೆಯು ಅಧಿಕಗೊಳ್ಳುವಂತೆ ಮಂತ್ರಿಗಳು ಎಚ್ಚರಿಕೆ ವಹಿಸಬೇಕು. ಅಧಿಕಾರಿಗಳಿಗೆ ಮಾರ್ಗದರ್ಶನ ಮಾಡಿ ಅವರು ಸರಿಯಾಗಿ ಸರಕಾರಿ ಧೋರಣೆಗಳನ್ನು ಕಾರ್ಯಗತ ಮಾಡುವಂತೆ ನೋಡಿಕೊಳ್ಳುವುದು ಮಂತ್ರಿಗಳ ವೈಯಕ್ತಿಕ ಮತ್ತು ಸಾಮೂಹಿಕ ಜವಾಬ್ದಾರಿಯಾಗಿದೆ. ಎಲ್ಲ ಮಂತ್ರಿಗಳಿಗಿಂತ ಅರ್ಥಮಂತ್ರಿಯು ಇಲಾಖೆಗಳ ಮೇಲೆ ಹೆಚ್ಚು ನಿಯಂತ್ರಣವನ್ನಿಟ್ಟುಕೊಳ್ಳಬಹುದಾಗಿದೆ.

## ೨. ವಿಧಾನಮಂಡಲದಿಂದ ಹತೋಟಿ

ಆಧುನಿಕ ಪಾರ್ಲಿಮೆಂಟು ಅಥವಾ ವಿಧಾನಮಂಡಳವು ಮಂತ್ರಿಮಂಡಳದ ಧೋರಣೆಗಳನ್ನೂ. ಆಡಳಿತ ಕ್ರಮವನ್ನೂ ಒರೆಗೆ ಹಚ್ಚುವ ಸಂಸ್ಥೆಯಾಗಿದೆ. ಮಂತ್ರಿಗಳಿಂದ ನೇರವಾದ ಹತೋಟಿ–ಹಿಡಿತ ಸಾಧ್ಯವಿದ್ದಂತೆ ವಿಧಾನ ಮಂಡಳದಿಂದ ಸಾಧ್ಯವಿಲ್ಲ. ಆದರೆ ವಿಧಾನ ಮಂಡಳವು ಪರಮಾಧಿಕಾರ ವಿರುವ ಸಭೆ. ಅಂತೆಯೇ ಶಾಸನ ಸಭೆಗೆ ಅದರಲ್ಲೂ ಬಹುಮತ ಪಕ್ಷಕ್ಕೆ ಅಖಂಡ ಅಧಿಕಾರವಿದೆ. ಆಡಳಿತ ತಂತ್ರಗಳ ವಿವರಗಳಿಗೆ ಹೋಗದೆ ಶಾಸನ ಸಭೆಯು ವಿಶಾಲ ರೀತಿಯಲ್ಲಿ

ಆಡಳಿತದ ಮೇಲ್ವಿಚಾರಣೆ ಮಾಡಬಹುದು. ಕಾರ್ಯಾಂಗದ ಅಧಿಕಾರಿಗಳಿಗೆ ಕಾನೂನು ಮತ್ತು ಮುಖ್ಯ ನಿಯಮಗಳನ್ನು ಮಾಡಲು ಶಾಸನ ಸಭೆಯು ಅನುಮತಿ ಕೊಡುತ್ತದೆ. ಇದನ್ನು Delegated Legislation ಎಂದು ಕರೆಯುತ್ತಾರೆ. ಇಲಾಖೆಗಳನ್ನೂ ಆಡಳಿತ ಹುದ್ದೆಗಳನ್ನೂ ತೆರೆಯುವುದಕ್ಕೆ ಮತ್ತು ಅವುಗಳ ನಿರ್ವಹಣೆಗೆ ಹಣ ಒದಗಿಸುವುದು ಶಾಸನ ಸಭೆಯ ಅಧಿಕಾರ. ಹಣವನ್ನು ಕೊಡಲು ನಿರಾಕರಿಸುವುದರ ಮೂಲಕ ಶಾಸನ ಸಭೆಯು ಆಡಳಿತದ ಮೇಲೆ ಹಿಡಿತವನ್ನಿಟ್ಟುಕೊಳ್ಳಬಹುದು. ಶಾಸನ ಸಭೆಯೇ ಹಣವನ್ನು ಕೊಡುವ ಸಂಸ್ಥೆಯಾದುದರಿಂದ ಅದರ ಹತೋಟಿ ಸ್ವಯಂವೇದ್ಯವಿದೆ. ಕಾನೂನುಗಳನ್ನು ರಚಿಸುವುದರ ಜೊತೆಗೆ ವಿಧಾನ ಮಂಡಲವು ಆಯವ್ಯಯವನ್ನು ಅಂಗೀಕರಿಸುತ್ತದೆ. ಆಗ ರಾಜ್ಯಪಾಲರ ಭಾಷಣವನ್ನು ಕುರಿತು ಮಾತಾಡುವಂತೆ, ಆಡಳಿತದ ಬಗ್ಗೆ ವಿಧಾನ ಮಂಡಲವು ಟೀಕೆ ಮಾಡಬಹುದು. ವಿಧಾನ ಮಂಡಲದ ಉಪಸಮಿತಿಗಳಾದ ಅಂದಾಜುಗಳ ಸಮಿತಿ ಮತ್ತು ಸಾರ್ವಜನಿಕ ಲೆಖ್ಖಗಳ ಸಮಿತಿಗಳು ಆಡಳಿತ ವಿಧಾನಗಳನ್ನು ಕುರಿತು ಮತ್ತು ನ್ಯಾಯವಾದ ರೀತಿಯಲ್ಲಿ ಹಣವನ್ನು ವೆಚ್ಚ ಮಾಡಲಾಗಿದೆಯೇ ಇಲ್ಲವೇ ಎಂಬ ಬಗ್ಗೆ ಪರಿಶೀಲಿಸಬಹುದು. ಆಡಳಿತದ ಬಗೆಗೆ ಅವರು ಪ್ರಶ್ನೆಗಳನ್ನು ಕೇಳಿ ಸರಕಾರದಿಂದ ಉತ್ತರಗಳನ್ನು ಪಡೆಯಬಹುದು. ಆಡಳಿತದಲ್ಲಿನ ನಿಧಾನ, ದಾಕ್ಷಿಣ್ಯ, ಲಂಚ, ಸರಕಾರಿ ಹಣದ ಅಪವ್ಯಯ ಮೊದಲಾದ ದೋಷ್ಯಗಳನ್ನು ಕುರಿತು ಸರಕಾರದಿಂದ ಸಮಾಧಾನಕರ ಹೇಳಿಕೆಗಳಿಗಾಗಿ

ಒತ್ತಾಯ ಪಡಿಸಬಹುದು. ಅಮೇರಿಕಾದ ಶಾಸನ ಸಭೆಗಳು ಆಡಳಿತದ ಮೇಲೆ ಹೆಚ್ಚು ಹತೋಟಿಯನ್ನಿಟ್ಟುಕೊಂಡಿವೆ. ಅಮೇರಿಕಾದ ಸಿನೇಟ್ ಕೆಲವು ಮುಖ್ಯ ನೇಮಕಗಳಿಗೆ ಸಹ ಒಪ್ಪಿಗೆ ನೀಡುತ್ತದೆ. ಒಟ್ಟಿನಲ್ಲಿ ವಿಧಾನ ಮಂಡಲದಿಂದ ನಡೆಯುವ ಹತೋಟಿಯು ಪರೋಕ್ಷವಾದುದು. ಅದರ ಕೆಲಸ ಆಡಳಿತ ನಡೆಸುವುದಲ್ಲ, ಧೋರಣೆಗಳನ್ನು ರೂಪಿಸುವುದು ಮತ್ತು ಅವು ಸರಿಯಾಗಿ ಕಾರ್ಯಕಾರಿಯಾಗುವಂತೆ ಒತ್ತಾಯ ಮಾಡುವುದು. ಇದಲ್ಲದೆ, ಬ್ರಿಟನ್ ಮುಂತಾದ ಕೆಲವು ರಾಜ್ಯಗಳಲ್ಲಿ ಸಿವಿಲ್ ಸರ್ವಿಸಿನ ಸದಸ್ಯರನ್ನು ವಿಧಾನ ಸಭೆಯಲ್ಲಿ ನೇರವಾಗಿ ಟೀಕಿಸುವ ಸಂಪ್ರದಾಯವಿಲ್ಲ. ಹೀಗೆ ವಿಧಾನ ಮಂಡಲವು ಆಡಳಿತದ ಮೇಲೆ ನಡೆಸುವ ನಿಯಂತ್ರಣಕ್ಕೆ ಕೆಲವು ಮಿತಿಗಳಿವೆ.

## (೩) ನ್ಯಾಯಾಂಗದಿಂದ ಹತೋಟಿ

ಆಡಳಿತವು ಕಾನೂನಿನ ಚೌಕಟ್ಟಿನಲ್ಲಿ ಸಾಗಬೇಕು. ಆಡಳಿತಗಾರರು ಕಾನೂನು ಮೀರಿ ನಡೆಯಬಾರದು. ಪ್ರಜೆಗಳ ಕಾನೂನುದತ್ತ ಸ್ವಾತಂತ್ರ್ಯಕ್ಕೆ ಆಡಳಿತ ವಿಧಾನಗಳಿಂದ ಧಕ್ಕೆಯಾಗಕೂಡದು. ಕಾನೂನಿಗೆ ವಿರುದ್ಧವಾಗಿ ಸರಕಾರ ಮತ್ತು ಆಡಳಿತಗಾರರು ವರ್ತಿಸದಂತೆ ತಡೆಯುವುದೇ ನ್ಯಾಯಾಂಗವು ಆಡಳಿತವನ್ನು ಹತೋಟಿ ಮಾಡುವ ಉದ್ದೇಶ. ಮ್ಯಾಂಡಮಸ್, ಹೆಬಿಯಸ್‌ಕಾರ್ಪಸ್ ಮೊದಲಾದ ಆಜ್ಞೆಗಳನ್ನು ನೀಡುವುದರ ಮೂಲಕ ನ್ಯಾಯಸ್ಥಾನ ಸರಕಾರದ ಚಟುವಟಿಕೆಗಳನ್ನು ನಿಯಂ

ತ್ರಿಸಬಹುದು. ಮೂಲಭೂತ ಹಕ್ಕುಗಳಿಗೆ ಸರಕಾರದ ಕಾನೂನು ಮತ್ತು ಆಡಳಿತ ಕ್ರಮಗಳು ಅಡ್ಡಿಯಾಗುವಂತಿದ್ದರೆ ಅವುಗಳನ್ನು ರದ್ದು ಪಡಿಸಲು ಕೋರ್ಟುಗಳಿಗೆ ಅಧಿಕಾರವಿದೆ. ಇದರಿಂದ ಆಡಳಿತವು ಕಾಯದೆ ಬಾಹಿರವಾಗಿ ನಡೆಯುವಂತಿಲ್ಲ. ಕಾಯದೆಭಂಗದ ಪ್ರಸಂಗಗಳನ್ನು ನ್ಯಾಯಾಂಗದ ಎದುರು ತಂದರೆ ನ್ಯಾಯಾಂಗವು ಪರಿಹಾರವನ್ನು ನೀಡುವುದು. ಇದನ್ನು ನ್ಯಾಯಾಂಗವಿಮರ್ಶೆ ( Judicial Review ) ಎಂದು ಹೇಳುತ್ತಾರೆ. ಯಾವ ಸಂದರ್ಭಗಳಲ್ಲಿ ನ್ಯಾಯಸ್ಥಾನಗಳು ಆಡಳಿತದ ವಿಷಯದಲ್ಲಿ ಪ್ರವೇಶ ಮಾಡಬಹುದು ಎಂಬುದು ಆಯಾ ದೇಶದ ಕಾನೂನು ಮತ್ತು ಸಂಪ್ರದಾಯಗಳನ್ನವಲಂಬಿಸಿದೆ.

## (೪) ಸಾರ್ವಜನಿಕರಿಂದ ಹತೋಟಿ

ಪ್ರಜೆಗಳು ನೇರವಾಗಿ ಆಡಳಿತದ ಮೇಲೆ ಹತೋಟಿಯನ್ನಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಆದರೆ ಪ್ರಜೆಗಳ ಅಪೇಕ್ಷೆಯಂತೆ ಆಡಳಿತವನ್ನು ನಡೆಸುವಂತೆ ಅವರು ಪ್ರಭಾವ ಬೀರಬಹುದು. ಸಾರ್ವಜನಿಕರು ಅಭಿಪ್ರಾಯವನ್ನು ಪತ್ರಿಕೆಗಳ ಮತ್ತು ಸಂಘ ಸಂಸ್ಥೆಗಳ ಮೂಲಕ ರೂಪಿಸಿ ಆಡಳಿತಕ್ಕೆ ನೆರವಾಗಬಹುದು. ಸರಿಯಾದ ಪ್ರತಿನಿಧಿಗಳನ್ನು ಆರಿಸುವುದರ ಮೂಲಕ ಪ್ರಜೆಗಳು ಆಡಳಿತವನ್ನು ನಿಯಂತ್ರಿಸಬಹುದು. ತಮ್ಮ ಚುನಾವಣಾ ಕ್ಷೇತ್ರದ ಪ್ರತಿನಿಧಿಗಳಿಗೆ ಪತ್ರ ಬರೆದು ಅಥವಾ ಕಂಡು ಆಡಳಿತದ ವಿಷಯಗಳನ್ನು ಚರ್ಚಿಸಬಹುದು,

ಮತ್ತು ಆಡಳಿತವನ್ನು ತಿದ್ದಲು ಪ್ರಭಾವ ಬೀರಬಹುದು. ನೇರವಾದ ಪ್ರಜಾಪ್ರಭುತ್ವವಿರುವ ಕಡೆ ಕೆಲವು ಅಧಿಕಾರಿಗಳನ್ನು ಪ್ರಜೆಗಳೇ ಚುನಾಯಿಸುತ್ತಾರೆ ಮತ್ತು ಅವರನ್ನು ಪದಚ್ಯುತರನ್ನಾಗಿ ಮಾಡಲು ಅವರಿಗೆ ಹಕ್ಕು ಇರುತ್ತದೆ. ಆದರೆ ಈ ಪದ್ಧತಿಯು ಅಷ್ಟು ವ್ಯಾಪಕವಾಗಿ ಅಸ್ತಿತ್ವದಲ್ಲಿಲ್ಲ. ಇದರಿಂದ ಬಾಧಕಗಳು ಹೆಚ್ಚು.

ಸಾರ್ವಜನಿಕರು ಆಡಳಿತವನ್ನು ತಿದ್ದಲು ಮುಂದೆ ಬರುವುದೇನೋ ಸ್ವಾಗತಾರ್ಹ. ಆದರೆ ಮಿತಿಮೀರಿ ಅವರು ಆಡಳಿತದಲ್ಲಿ ಕೈಹಾಕಬಾರದು. ಕೆಲವು ಸಂಪ್ರದಾಯಗಳನ್ನು ಪಾಲಿಸಬೇಕು. ಪ್ರತಿಯೊಂದಕ್ಕೂ ಮಂತ್ರಿಗಳಿಗೆ ನೇರವಾಗಿ ಅರ್ಜಿ ಕೊಡುವುದೂ, ಆಡಳಿತಾಧಿಕಾರಿಗಳ ವರ್ಗಾವಣೆ ಮೊದಲಾದ ದಿನಚರಿ ವಿಷಯಗಳಲ್ಲಿ ಕೈಹಾಕುವುದೂ ಒಳ್ಳೆಯ ಪದ್ಧತಿಯಲ್ಲ. ಒಳ್ಳೆಯ ಆಡಳಿತಕ್ಕೆ ಇವು ವಿರೋಧವಾಗಿವೆ. ಆಡಳಿತದಲ್ಲಿ ಲೋಪದೋಷಗಳಿದ್ದರೆ ಶಾಸನಸಭಾ ಸದಸ್ಯರಿಗಾಗಲೀ, ಮಂತ್ರಿಗಳಿಗಾಗಲೀ ಅಥವಾ ಇಲಾಖಾ ಮುಖ್ಯಾಧಿಕಾರಿಗಳಿಗಾಗಲೀ ತಿಳಿಸಬೇಕು. ಆರೋಪಗಳನ್ನು ಹೊರಿಸುವಾಗ ಚೆನ್ನಾಗಿ ವಿಚಾರಿಸಿಕೊಂಡು ಮುಂದುವರಿಯಬೇಕು. ಈಗಿನ ಕಾಲದಲ್ಲಿ ಪ್ರಜೆಗಳು ಆಡಳಿತದೊಡನೆ ಸಹಕರಿಸಲು ಎಲ್ಲ ಮಟ್ಟದಲ್ಲಿಯೂ ಸಲಹಾ ಸಮಿತಿಗಳನ್ನು ನೇಮಿಸುವ ಪದ್ಧತಿ ಏರ್ಪಟ್ಟಿದೆ. ಇದು ಪ್ರಜಾಪ್ರಭುತ್ವದ ಆಡಳಿತದ ಒಂದು ಲಕ್ಷಣ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಅಸಂಖ್ಯಾತ ಸಮಿತಿಗಳನ್ನು ನೇಮಿಸುತ್ತಿವೆ. ಅವುಗಳಿಂದ ಆಡಳಿತಕ್ಕೆ ಪ್ರಯೋಜನವಾಗಬೇಕೆಂ

ಬುದು ಸರಕಾರದ ಆಶಯು. ಈ ಆಶೆಯುನ್ನು ನೆರವೇರಿಸಿ ಕೊಡುವುದು ಮುಹಾಜನಗಳ ಕರ್ತವ್ಯ.

ಇತ್ತೀಚೆಗೆ, ಆಡಳಿತ ಮತ್ತು ಸಾರ್ವಜನಿಕರಲ್ಲಿ ಹೆಚ್ಚಿನ ಸಂಪರ್ಕವನ್ನು ಬೆಳೆಸುವ ಉದ್ದೇಶದಿಂದ ಸಾರ್ವಜನಿಕ ಸಂಪರ್ಕಾಧಿಕಾರಿಗಳನ್ನು (Public Relations Officers)ನೇಮಿಸುವ ಪರಿಪಾಠವೇರ್ಪಟ್ಟಿದೆ. ಇವರ ಮೂಲಕ ಸರಕಾರದ ಧೋರಣೆಗಳನ್ನೂ ಕಾರ್ಯಕ್ರಮುಗಳನ್ನೂ ಜನತೆಗೆ ತಿಳಿಸಲಾಗುತ್ತದೆ. ಸರಕಾರದ ಚಟುವಟಿಕೆಗಳ ವಿಷಯುದಲ್ಲಿ ಶಿಕ್ಷಣ ಅಥವಾ ತಿಳಿವಳಿಕೆಯುನ್ನು ಕೊಡುವುದು ಪ್ರಸಿದ್ಧಿಶಾಖೆಯು ಕೆಲಸ. ಆದರೆ ಸಂಪರ್ಕಾಧಿಕಾರಿ ಪ್ರಚಾರಾಧಿಕಾರಿಯುಲ್ಲ.ಸರಕಾರದಿಂದ ನೇಮಕವಾದ ಸಲಹಾಸಮಿತಿಗಳ ಮೂಲಕ ಸಾರ್ವಜನಿಕರು ಸರಕಾರದ ಪ್ರಸಿದ್ಧಿ ಶಾಖೆಯು ಬಗೆಗೆ ತಮ್ಮ ಅಭಿಪ್ರಾಯುಗಳನ್ನು ವ್ಯಕ್ತಪಡಿಸಬೇಕು. ಆಡಳಿತಗಾರರಿಗೆ ಪ್ರಜಾಭಿವೃದ್ಧಿ ಕಾರ್ಯದಲ್ಲಿ ಸಾಧ್ಯವಾದ ರೀತಿಯುಲ್ಲಿ ನೆರವಾಗುವುದರ ಮೂಲಕ ಎಲ್ಲರೂ ಆಡಳಿತದ ಮೇಲೆ ಪ್ರಭಾವ ಬೀರಬಹುದಾಗಿದೆ. ಸಾರ್ವಜನಿಕ ಆಡಳಿತವು ಹೊಣೆಗೆಟ್ಟ ಆಡಳಿತವಲ್ಲ. ಅನೇಕರ ಅಂಕೆ ಮತ್ತು ಆಜ್ಞೆಗಳಿಗೊಳಗಾಗಿ ಅದು ನಡೆಯುಬೇಕು. ಅದು ಮುಖ್ಯವಾಗಿ ಶಾಸನಸಭೆಗೂ (ಬಹುಮತ ಪಕ್ಷಕ್ಕೂ), ಮಂತ್ರಿಮಂಡಲಕ್ಕೂ, ನ್ಯಾಯುಸ್ಥಾನಕ್ಕೂ,ಸಾರ್ವಜನಿಕರಿಗೂ ಜವಾಬ್ದಾರವಾಗಿ ನಡೆದುಕೊಳ್ಳಬೇಕು. ಈ ಚತುರ್ವಿಧ ಬಾಹ್ಯ ಅಂಶಗಳಲ್ಲದೆ, ಲೆಖ್ಖ ಮತ್ತು ಪರಿಶೋಧನೆ (Audit) ಮೊದಲಾದ ಒಳ ಅಂಕಿತಗಳಿಗೂ ಒಳಗಾಗಿ ನಡೆಯುಬೇಕು.

# ೬. ಸಿವಿಲ್ ಸರ್ವಿಸಿನ ಪಾತ್ರ

## ಸಿವಿಲ್ ಸರ್ವಿಸ ಎಂದರೇನು?

ಆಧುನಿಕ ಕಾಲದ ರಾಜ್ಯಾಡಳಿತದ ಚಾಲಕರು ಪ್ರಜೆಗಳೂ ಅಲ್ಲ ಪಾರ್ಲಿಮೆಂಟೂ ಅಲ್ಲ; ಅಥವಾ ಮಂತ್ರಿಗಳೂ ಅಲ್ಲ. ಆಡಳಿತವನ್ನು ನಡೆಸುವವರು ಸರಕಾರೀ ಅಧಿಕಾರೀ ವರ್ಗದ ಸದಸ್ಯರುಗಳು. ಇದನ್ನೇ 'ಸಿವಿಲ್ ಸರ್ವಿಸ್' ಎಂದು ಸಂಬೋಧಿಸುತ್ತೇವೆ. ಸರಕಾರಿ ಆಡಳಿತದ ಸೂತ್ರ ಮಂತ್ರಿಮಂಡಳದ ಕೈಯಲ್ಲಿರುತ್ತದೆ. ಆದರೆ ವಾಸ್ತವವಾಗಿ ಸರಕಾರಿ ಆಡಳಿತವನ್ನು ನಿರ್ವಹಿಸುವವರು ಸರಕಾರಿ ಸೇವೆಯಲ್ಲಿ ನಿರತರಾಗಿರುವ ಅಧಿಕಾರಿ ವರ್ಗದವರು. ಈ ಅಧಿಕಾರಿ ವರ್ಗವೆಂದರೆ ತಿಂಗಳಿಗೆ ಎರಡು ಸಾವಿರ ಅಥವಾ ಮೂರು ಸಾವಿರ ರೂಪಾಯಿಗಳ ಸಂಬಳ ಪಡೆಯುವ ಶ್ರೇಷ್ಠ ಅಧಿಕಾರಿಗಳಾಗಬಹುದು. ಅಥವಾ ಕೆಳವರ್ಗದ ನೌಕರರಾಗಬಹುದು. ಸರಕಾರದ ಮುಖ್ಯ ಕಾರ್ಯದರ್ಶಿಯ ಹಂತದಿಂದ ಅತ್ಯಂತ ಕೆಳ ದರ್ಜೆಯ ಜವಾನನ ಮಟ್ಟದವರೆಗೂ ಸರಕಾರಿ ನೌಕರಿಯನ್ನೇ ಜೀವನೋಪಾಯವಾಗಿ ಮಾಡಿಕೊಂಡಿರುವ ವರ್ಗವನ್ನೇ 'ಸಿವಿಲ್ ಸರ್ವಿಸ್' ಎಂದು ಕರೆಯುತ್ತೇವೆ. ಯಾವುದು ಮಿಲಿಟರಿ ಸರ್ವಿಸ್ ಅಲ್ಲವೋ ಅದು ಸಿವಿಲ್ ಸರ್ವಿಸು ಎಂಬ ಭಾವನೆ ನಮ್ಮಲ್ಲಿ ಬಂದಿದೆ. ಆಡಳಿತ ವರ್ಗ

ವನ್ನು ಮಾಡಿಕೆಯಲ್ಲಿ ಸಿವಿಲ್ ಸರ್ವಿಸ್ ಎನ್ನುತ್ತೇವೆ. ಉದಾಹರಣೆಗಾಗಿ ಅರಣ್ಯ ಇಲಾಖೆ, ಎಂಜನಿಯರಿಂಗ್ ಇಲಾಖೆ, ಪಬ್ಲಿಕ್ ವರ್ಕ್ಸ ಇಲಾಖೆಗಳ ಸಿಬ್ಬಂದಿಯನ್ನು ಸಿವಿಲ್ ಸರ್ವಿಸು ಎಂದು ಹೇಳುವುದಿಲ್ಲ. ಸರಕಾರಿ ಸೇವಕವರ್ಗದ ಕೆಸೆಯೇ ನೌಕರಿಶಾಹಿ ಅಥವಾ ಸಿವಿಲ್ ಸರ್ವಿಸು ಎನ್ನಬಹುದು.

ಸಿವಿಲ್ ಸರ್ವಿಸು ಮಿಲಿಟರಿ ಸೇವೆ, ನ್ಯಾಯಾಂಗಸೇವೆ ಮುಂತಾದವುಗಳಿಂದ ಭಿನ್ನವಾದುದು. ಸಿವಿಲ್ ಸರ್ವಿಸಿನಲ್ಲಿರುವ ಉನ್ನತ ಅಧಿಕಾರಿಗಳೇ ಆಗಲಿ, ಕೆಳದರ್ಜೆಯ ನೌಕರರೇ ಆಗಲಿ, ಸರಕಾರದ ಅರ್ಥಾತ್ ರಾಜ್ಯದ ಜನಗಳ ಸೇವೆಯನ್ನು ದಕ್ಷತೆಯಿಂದಲೂ ನಿಷ್ಠೆಯಿಂದಲೂ ಉತ್ಸಾಹದಿಂದಲೂ ಮಾಡಬೇಕು. ಇದಕ್ಕಾಗಿ ಅವರಿಗೆ ಕೈತುಂಬ ಸಂಬಳ ಮತ್ತು ಇತರ ಸೌಲಭ್ಯಗಳನ್ನು ಸರಕಾರ ಒದಗಿಸಿಕೊಡುತ್ತದೆ. ಸರಕಾರದ ಧೋರಣೆ (Policy) ಗಳನ್ನೂ ಕಾರ್ಯಕ್ರಮಗಳನ್ನೂ ಆಜ್ಞೆಗಳನ್ನೂ ಕಾರ್ಯಗತ ಮಾಡುವುದು ಸಿವಿಲ್ ಸರ್ವಿಸಿನ ಕರ್ತವ್ಯವಾಗಿದೆ. ಇಂದು ಯಾವ ಬಗೆಯ ಸರಕಾರವೇ ಆಗಲಿ–ಪ್ರಜಾಪ್ರಭುತ್ವವೇ ಆಗಲಿ ಅಥವಾ ಸರ್ವಾಧಿಕಾರವೇ ಆಗಲಿ–ಉತ್ತಮ ದರ್ಜೆಯ ಸಿವಿಲ್ ಸರ್ವೀಸನ್ನು ಏರ್ಪಡಿಸಿಕೊಳ್ಳಲೇಬೇಕು. ಸಿವಿಲ್ ಸರ್ವಿಸ್ ಇಲ್ಲದ ರಾಜ್ಯವೇ ಇಲ್ಲ. ಫೆಡರಲ್ ರಾಜ್ಯಗಳಲ್ಲಿ ಕೇಂದ್ರ ಮತ್ತು ಪ್ರಾಂತಸರಕಾರಗಳು ಪ್ರತ್ಯೇಕವಾದ ಸಿವಿಲ್ ಸರ್ವಿಸುಗಳನ್ನು ಏರ್ಪಡಿಸಿಕೊಂಡಿವೆ. ಸಿವಿಲ್ ಸರ್ವಿಸು ಆಧುನಿಕ ಸರಕಾರದ ಮುಖ್ಯ ಕಾರ್ಯ ನಿರ್ವಾಹಕ ಆಡಳಿತ ಪಂಗಡವಾಗಿದೆ.

ಸಿವಿಲ್ ಸರ್ವಿಸ್ ಕೇವಲ ಇತ್ತೀಚೆಗಿನ ಸೃಷ್ಟಿ.* ಆಧುನಿಕ ಕಾಲದಲ್ಲಿ ಮೊಟ್ಟಮೊದಲು ಸಿವಿಲ್ ಸರ್ವಿಸನ್ನು ಸಂಘಟಿಸಿದ ರಾಷ್ಟ್ರವೆಂದರೆ ಪ್ರಶ್ಯಾ. ೧೮೦೦ ರಲ್ಲೇ ಈ ದೇಶದಲ್ಲಿ ಸಿವಿಲ್ ಸರ್ವಿಸ್ ಏರ್ಪಟ್ಟಿತ್ತು. ಆಮೇಲೆ ಬ್ರಿಟನ್, ಫ್ರಾನ್ಸ್, ಜರ್ಮನಿ, ಮೊದಲಾದ ದೇಶಗಳಲ್ಲಿ ಸಿವಿಲ್ ಸರ್ವಿಸಿನ ಸಂಘಟನೆಯಾಯಿತು. ಇಂದು ಸಿವಿಲ್ ಸರ್ವಿಸಿನ ಸಂಖ್ಯೆ ಸೈನ್ಯದ ಸಂಖ್ಯೆಯಂತೆ ಬೆಳೆದಿದೆ. ಪ್ರತಿ ದೇಶದಲ್ಲಿ ಅಸಂಖ್ಯ ಜನ ಸರಕಾರಿ ಸೇವೆಯಲ್ಲಿ ಕೆಲಸ ಮಾಡುತ್ತಾರೆ. ಲಕ್ಷಾಂತರ ಜನಗಳಿಗೆ ಸಿವಿಲ್ ಸರ್ವಿಸು ಜೀವನೋಪಾಯದ ಸಾಧನವಾಗಿದೆ. ಆಧುನಿಕ ಸರಕಾರವು ರಾಜ್ಯದ ಅನೇಕರಿಗೆ ಉದ್ಯೋಗ ಕೊಡುವ ದೊಡ್ಡ ಧಣಿಯಾಗಿದೆ. ಈ ಕೆಳಕಾಣಿಸಿದ ಅಂಕೆ ಸಂಖ್ಯೆಗಳಿಂದ ನಾವು ಅದನ್ನು ಮನಗಾಣಬಹುದು: ೧೯೪೮ನೇ ಏಪ್ರಿಲ್ ಒಂದನೆಯ ತಾರೀಖಿಗೆ ಬ್ರಿಟನ್ನಿನ ಸರಕಾರಿ ಸೇವೆಯಲ್ಲಿ ಸುಮಾರು ಏಳು ಲಕ್ಷ ಜನರು ಕೆಲಸ ಮಾಡುತ್ತಿದ್ದರು. ಇದರಲ್ಲಿ ಲಂಡನಿನಲ್ಲಿ ತುಂಬ ಜನ ಕೇಂದ್ರೀಕೃತವಾಗಿದ್ದರು. ಬ್ರಿಟನ್ನಿನ ಮೂಲೆಮೂಲೆಯಲ್ಲಿರುವ ಅಧಿಕಾರಿವರ್ಗದವರು ಆಡಳಿತ ಯಂತ್ರದ ಭಾಗವಾಗಿ ಕಾರ್ಯನಿರತರಾಗಿರುತ್ತಾರೆ. ಬ್ರಿಟನ್ನಿನ ಸರಕಾರಿ ನೌಕರರನ್ನು ಆಡಳಿತವರ್ಗ, ಕಾರ್ಯನಿರ್ವಾಹಕವರ್ಗ,

---

* ಶ್ರೀ ಪಣಿಕ್ಕರರು ಪ್ರಾಚೀನ ಭಾರತ, ಈಜಿಪ್ಟ ಮತ್ತು ಚೀನಗಳಲ್ಲಿ ಸುಸಂಘಟಿತ ನೌಕರವರ್ಗವಿತ್ತೆಂದು ಅಭಿಪ್ರಾಯಪಡುತ್ತಾರೆ. ಅವರ "Civil Services, History and Problems" ನೋಡಿರಿ. (೧೯೫೫ರ ಪ್ರಕಟನೆ)

ಕಾರಕೂನರ ವರ್ಗ ಮತ್ತು ಕಾರಕೂನರ ಸಹಾಯಕ ವರ್ಗವೆಂದು ನಾಲ್ಕು ಭಾಗವಾಗಿ ವರ್ಗೀಕರಿಸಲಾಗಿದೆ. ಸರಕಾರಿ ನೌಕರಿಯು ಕೆನೆಯಂತಿರುವ ಆಡಳಿತವರ್ಗ (Administrative Class)ವೇ ತುಂಬ ಮುಖ್ಯವಾದದ್ದು. ಈ ಉನ್ನತ ವರ್ಗದಲ್ಲಿ ಸುಮಾರು ನಾಲ್ಕು ಸಾವಿರ ಶ್ರೇಷ್ಠ ಅಧಿಕಾರಿಗಳಿದ್ದಾರೆ. ಬ್ರಿಟಿಷ್ ಸಿವಿಲ್ ಸರ್ವೀಸು ಲೋಕವಿಖ್ಯಾತವಾಗಿದೆ.

ಅಮೇರಿಕದಲ್ಲಿ ರಾಜ್ಯ ಸರಕಾರಗಳಿವೆ ಮತ್ತು ಫೆಡರಲ್ ಸರಕಾರವಿದೆ. ಸರಕಾರದ ಸೇವೆಯಲ್ಲಿ ಅಸಂಖ್ಯಾತ ಜನ ಕೆಲಸ ಮಾಡುತ್ತಿದ್ದಾರೆ. ೧೭೮೯ರಲ್ಲಿ ಕೇವಲ ೩೦೦ ಜನ ಫೆಡರಲ್ ಸರ್ವೀಸಿನಲ್ಲಿದ್ದರು. ೧೯೪೫ರ ಜನೆವರಿ ೧ ರಂದು ಫೆಡರಲ್ ಸರಕಾರದ ನೌಕರರ ಸಂಖ್ಯೆ ಪರಮಾವಧಿಯನ್ನು ಮುಟ್ಟಿತ್ತು. ಎರಡನೇ ಪ್ರಪಂಚ ಯುದ್ಧದ ಪ್ರಯುಕ್ತ ಸರಕಾರದಲ್ಲಿ ಸೇವೆ ಮಾಡಲು ನೌಕರರ ಆವಶ್ಯಕತೆ ವಿಶೇಷವಾಗಿತ್ತು. ೧೯೪೫ರ ಆದಿಯಲ್ಲಿ ಫೆಡರಲ್ ಸರಕಾರಿ ನೌಕರರ ಸಂಖ್ಯೆ ೩೩,೭೫,೦೦೦ ವರೆಗೂ ಬಂದಿತ್ತು. ಯುದ್ಧ ಮುಗಿದು ಶಾಂತಿ ಏರ್ಪಟ್ಟಾಗಲೂ ಸಹ ಎಂದರೆ ೧೯೪೬ನೇ ಡಿಸೆಂಬರದಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ೨೨ ಲಕ್ಷಕ್ಕೂ ಮೀರಿದ ಜನಸಂಖ್ಯೆ ಸರಕಾರೀ ಕೆಲಸದಲ್ಲಿತ್ತು. ಅಮೇರಿಕಾದಲ್ಲಿ ಫೆಡರಲ್ ಸರಕಾರದಲ್ಲಿ ಕೆಲಸ ಮಾಡುವ ಜನರಲ್ಲಿ ಸುಮಾರು ಶೇಕಡ ೨೫ರಷ್ಟು ಮಹಿಳೆಯರು. ಅಮೇರಿಕದ ರಾಜ್ಯ ಸರಕಾರಗಳ ಒಟ್ಟು ನೌಕರರ ಸಂಖ್ಯೆ ಫೆಡರಲ್ ಸರಕಾರೀ ನೌಕರರ ಸಂಖ್ಯೆಯನ್ನು ಮೀರಿಸುತ್ತದೆ.

ಭಾರತದಲ್ಲಿಯೂ ಕೂಡ ಅಸಂಖ್ಯಾತ ಜನ ಕೇಂದ್ರ ಸರಕಾರದಲ್ಲಿಯೂ ರಾಜ್ಯ ಸರಕಾರಗಳಲ್ಲಿಯೂ ನೌಕರರಾಗಿ ದುಡಿಯುತ್ತಾರೆ. ಆದರೆ ಅಮೇರಿಕಾ ಮತ್ತು ಭಾರತದಲ್ಲಿ ಒಂದು ಅಂತರವಿದೆ. ಮೇಧಾವಿಗಳೂ ಬುದ್ಧಿವಂತರೂ ಅಮೇರಿಕದಲ್ಲಿ ಖಾಸಗೀ ಕ್ಷೇತ್ರದ ಉದ್ಯಮಗಳಿಗೆ ನುಗ್ಗುತ್ತಾರೆ. ಭಾರತದಲ್ಲಿ ಬುದ್ಧಿವಂತ ವಿದ್ಯಾವಂತರಿಗೆ ಸರಕಾರಿ ಸೇವೆ ದೊಡ್ಡ ಆಕರ್ಷಣೆಯಾಗಿ ಪರಿಣಮಿಸಿದೆ. ನಮ್ಮ ದೇಶದಲ್ಲಿ ಕೇಂದ್ರ ಸರಕಾರದಲ್ಲಿ ವಿವಿಧ ಇಲಾಖೆಗಳಲ್ಲಿ ಲಕ್ಷಾಂತರ ನೌಕರರು ಕೆಲಸ ಮಾಡುತ್ತಿದ್ದಾರೆ. ರೇಲ್ವೆ ಇಲಾಖೆ, ಅಂಚೆ ಇಲಾಖೆ, ಸುಂಕದ ಇಲಾಖೆ, ತೆರಿಗೆ ಇಲಾಖೆ, ವಿಸ್ತರಣಖಾತೆ ಮುಂತಾದ ಕೆಲವು ಇಲಾಖೆಗಳ ಹೆಸರನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ಕೇಂದ್ರ ಸರಕಾರದ ಸೇವೆಯಲ್ಲಿರುವ ಅಧಿಕಾರ ವರ್ಗವಲ್ಲದೆ ಅಖಿಲ ಭಾರತ ಸರ್ವಿಸ್‌ಗಳೆಂಬ ಕೆಲವು ಅತ್ಯಂತ ಶ್ರೇಷ್ಠ ದರ್ಜೆಯ ಸರ್ವಿಸುಗಳೇರ್ಪಟ್ಟಿವೆ. ಐ. ಎ. ಎಸ್. ಮತ್ತು ಐ. ಪಿ. ಎಸ್. ಎಂಬುವು ಅಖಿಲ ಭಾರತ ಆಡಳಿತಕ್ಕೆ ಸಂಬಂಧಿಸಿದ ಸರ್ವಿಸುಗಳಾಗಿವೆ. ಬ್ರಿಟಿಷರ ಕಾಲದಲ್ಲಿ ಅತ್ಯಂತ ಹೆಸರಾಗಿದ್ದ I. C. S. ಎಂಬ ಸೇವಾ ಸಂಸ್ಥೆಯ ಸ್ಥಳದಲ್ಲಿ ಇಂದು I. A. S. ಎಂಬ ಅಧಿಕಾರೀ ಪಂಗಡ ಏರ್ಪಟ್ಟಿದೆ. I. A. S. ಅಧಿಕಾರಿಗಳಾಗುವುದು ಇಂದಿನ ಅನೇಕ ಆಶಾವಾದೀ ಪದವೀಧರರ ಹಂಬಲವಾಗಿದೆ. ಪ್ರತಿ ರಾಜ್ಯದಲ್ಲಿಯೂ ಪ್ರತ್ಯೇಕವಾದ ಸರಕಾರೀ ಆಡಳಿತದ ವರ್ಗವಿದೆ. ಪ್ರತಿ ರಾಜ್ಯದಲ್ಲೂ, ಮುಖ್ಯವಾಗಿ ರೆವಿನ್ಯೂ, (ಕಂದಾಯ) ಕಾನೂನು ಮತ್ತು ಶಿಸ್ತು, ವ್ಯವ

ಸಾಯ, ವಿದ್ಯಾಭ್ಯಾಸ ಮುಂತಾದ ೧೫ ಇಲ್ಲವೇ ೧೮ ಆಡಳಿತದ ಇಲಾಖೆಗಳಿವೆ. ಮೈಸೂರು ರಾಜ್ಯದಲ್ಲಿ ಇಂದು ಸುಮಾರು ಒಂದು ಲಕ್ಷ ಜನ ಸರಕಾರಿ ನೌಕರಿಯಲ್ಲಿ ತೊಡಗಿರುತ್ತಾರೆ.

ಪ್ರಜಾಪ್ರಭುತ್ವ ಪದ್ಧತಿಯ ಪ್ರಕಾರವಿರುವ ಇಂಗ್ಲೆಂಡ್ ಮತ್ತು ಭಾರತ ಮುಂತಾದ ದೇಶಗಳಲ್ಲಿ ಸಿವಿಲ್ ಸರ್ವಿಸಿನ ಪಾತ್ರ ತುಂಬ ಮಹತ್ವದ್ದು. ಪ್ರಜಾಪ್ರಭುತ್ವದಲ್ಲಿ ಮಂತ್ರಿಗಳು ಬರುತ್ತಾರೆ, ಹೋಗುತ್ತಾರೆ. ಸರಕಾರಿ ಅಧಿಕಾರಿಗಳು ಮಾತ್ರ ಖಾಯಂ ಆಗಿ ಉಳಿಯುವವರು. ಸರಕಾರಿ ಅಧಿಕಾರಿಗಳನ್ನು ಬಲವಾದ ಕಾರಣಗಳಿಲ್ಲದೆ ಮತ್ತು ತನಿಖೆಮಾಡಿ ತಪ್ಪಿತಸ್ಥರೆಂದು ಸಿದ್ಧಮಾಡದೆ ಕೆಲಸದಿಂದ ತೆಗೆದುಹಾಕಲು ಸಾಧ್ಯವಿಲ್ಲ. ಸಾಮಾನ್ಯವಾಗಿ ನೌಕರನು ನಿವೃತ್ತನಾಗುವವರೆಗೂ ಯಾವ ಚಿಂತೆಯಿಲ್ಲದೆ ಅಧಿಕಾರದಲ್ಲಿರಬಹುದು. ಮನಸ್ಸಿಗೆ ಬಂದ ರೀತಿಯಲ್ಲಿ ಅಧಿಕಾರಿಗಳನ್ನು ಸ್ಥಾನಚ್ಯುತರನ್ನಾಗಿ ಮಾಡುವುದು ಸಾಧ್ಯವಿಲ್ಲ. ಸಿವಿಲ್ ಸರ್ವಿಸ್‌ನಲ್ಲಿ ಈ ಸುರಕ್ಷಿತತೆಯಿದೆ. ಆದರೆ ಮಂತ್ರಿ ಮಂಡಳಗಳು ಖಾಯಂ ಆಗಿ ಅಧಿಕಾರದಲ್ಲಿರುವುದಿಲ್ಲ. ನಾಲ್ಕು ಅಥವಾ ಐದು ವರ್ಷಗಳಿಗೊಮ್ಮೆ ಅವು ಬದಲಾಗುತ್ತವೆ. ಅವಿಶ್ವಾಸ ಠರಾವು ಬಂದರೆ ಮಂತ್ರಿಮಂಡಲಗಳು ಅಕಾಲ ಮರಣಕ್ಕೆ ತುತ್ತಾಗುತ್ತವೆ. ಹೀಗಿರುವಾಗ ಆಡಳಿತವು ಹರಿ–ಮುರಿಯಿಲ್ಲದೆ ನಿರಂತರವಾಗಿ ಸಾಗಲು ಸಿವಿಲ್ ಸರ್ವಿಸಿನ ಸಹಾಯ ಅನಿವಾರ್ಯ.

ಸಿವಿಲ್ ಸರ್ವಿಸಿನ ಒಂದು ಮುಖ್ಯ ಲಕ್ಷಣವು ರಾಜಕೀಯದಿಂದ ಅಲಿಪ್ತವಾಗಿರುವುದು ಮತ್ತು ನಿಷ್ಪಕ್ಷಪಾತವಾಗಿ

ನಡೆದುಕೊಳ್ಳುವುದು. ಪ್ರಜಾಪ್ರಭುತ್ವವೆಂದರೆ ಪಕ್ಷದ ಸರಕಾರ. ಒಂದು ಪಕ್ಷ ಅಧಿಕಾರದಲ್ಲಿದ್ದರೆ ವಿರೋಧಿ ಪಕ್ಷ ಆಡಳಿತವನ್ನು ಎಚ್ಚರಿಕೆಯಿಂದ ವೀಕ್ಷಿಸುತ್ತಿರುತ್ತದೆ. ಇಂದು ಅಧಿಕಾರದಲ್ಲಿರುವ ಪಕ್ಷ ನಾಳೆ ವಿರೋಧಿ ಪಕ್ಷವಾಗಬಹುದು. ಇಂದಿನ ವಿರೋಧಿ ಪಕ್ಷವು ನಾಳೆ ಸರಕಾರವನ್ನು ರಚಿಸಬಹುದು. ಆದ್ದರಿಂದ ಅಧಿಕಾರ ವರ್ಗದವರು ಯಾವ ಪಕ್ಷಕ್ಕೂ ಅಂಟಿಕೊಂಡಿರದೆ ಸರಕಾರಿ ಕಟ್ಟಳೆಗಳ ಪ್ರಕಾರ ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಅಧಿಕಾರಿಗಳು ರಾಜಕೀಯಕ್ಕೆ ಕೈ ಹಾಕಬಾರದು. ರಾಜಕೀಯ ಪಕ್ಷ ಮತ್ತು ಉಮೇದುವಾರರಿಗೆ ಯಾವ ರೀತಿಯ ಬೆಂಬಲವನ್ನು ಕೊಡದೆ ತಟಸ್ಥವಾಗಿರಬೇಕು. ತಮಗೆ ಬೇಕಾದ ಉಮೇದುವಾರರಿಗೆ ಮತ ಕೊಡುವದನ್ನು ಬಿಟ್ಟರೆ ಅಧಿಕಾರಿಗಳಿಗೆ ಬೇರೆ ಯಾವ ರಾಜಕೀಯ ಕರ್ತವ್ಯಗಳೂ ಕೂಡದು. ರಾಜಕೀಯ ಭಾಷಣ ಮಾಡುವುದಾಗಲೀ, ರಾಜಕೀಯ ಲೇಖನಗಳನ್ನು ಬರೆಯುವುದಾಗಲೀ, ಪಕ್ಷದ ಹುರಿಯಾಳುಗಳಿಗೆ ಪ್ರೋತ್ಸಾಹ ಕೊಡುವದಾಗಲೀ ಅಧಿಕಾರಿಗಳಿಗೆ ಸಲ್ಲದು. ರಾಜಕೀಯ ಪಕ್ಷಗಳ ಸದಸ್ಯನಾಗುವುದಕ್ಕೆ ಮತ್ತು ಶಾಸನ ಸಭೆಗಳಿಗೆ ಸ್ಪರ್ಧಿಸುವುದಕ್ಕೆ ಪ್ರತಿಬಂಧಕವಿದೆ. ಸರಕಾರಿ ಹುದ್ದೆಗಳಿಗೆ ರಾಜೀನಾಮೆ ಕೊಟ್ಟು ಅಧಿಕಾರಿಗಳು ಚುನಾವಣೆಗೆ ನಿಲ್ಲಬಹುದು. ಸರಕಾರಿ ಅಧಿಕಾರಿಗಳು ದೇಶದ ರಾಜಕೀಯ ಸೆಳೆತಗಳಿಂದ ದೂರವಿದ್ದು ಸರಕಾರಕ್ಕೆ ವಿಧೇಯರಾಗಿದ್ದು ಕಾನೂನು ಪ್ರಕಾರ ವರ್ತಿಸಬೇಕು. ಸಿವಿಲ್ ಸರ್ವಿಸ್ಸಿಗೆ ರಾಜಕೀಯ ತಾಟಸ್ಥ್ಯ ಮತ್ತು ನಿಷ್ಪಕ್ಷಪಾತವಾದ

ನಡತೆ ಬಹು ಮುಖ್ಯ. ಪ್ರಜಾಪ್ರಭುತ್ವದಲ್ಲಿ ಅಧಿಕಾರಿಗಳು ರಾಜಕೀಯ ಪಕ್ಷಗಳ ಅಥವಾ ವ್ಯಕ್ತಿಗಳ ಕೈಗೊಂಬೆಯಾಗಬಾರದು. ಪಕ್ಷಾತೀತರಾಗಿರಬೇಕಾದ ಅಧಿಕಾರಿಗಳು ರಾಜಕೀಯ ಚಿತಾವಣೆಗಿಳಿದು, ರಾಜಕಾರಣಿಗಳಂತೆ ವರ್ತಿಸತೊಡಗಿದರೆ ಆಡಳಿತದ ಪಾವಿತ್ರ್ಯಕ್ಕೆ ಭಂಗ ಬರುತ್ತದೆ. ಅಧಿಕಾರಿಯು ರಾಜಕೀಯ 'ಕಿತಾಪತಿ' ಮಾಡಿದರೆ ಸರಕಾರಿ ಆಡಳಿತ ನಿಷ್ಪಕ್ಷಪಾತವಾಗಲಾರದು.

ಅಧಿಕಾರಿಗಳು ಇಂತಹದನ್ನು ಮಾಡಬೇಕು, ಇಂತಹದನ್ನು ಮಾಡಕೂಡದೆಂಬ ವಿಧಿ ನಿಷೇಧಗಳಿವೆ. ಅಧಿಕಾರಿಯು ವರ್ತನೆಯನ್ನು ನಿರ್ದೇಶಿಸುವ ನಿಯಮಗಳಿರುತ್ತವೆ. ಸಾಮಾನ್ಯವಾಗಿ ಅಧಿಕಾರಿಗಳು ಪ್ರಾಮಾಣಿಕವಾಗಿ ಮತ್ತು ಪ್ರಜಾಹಿತದೃಷ್ಟಿಯಿಂದ ನಡೆದುಕೊಳ್ಳಬೇಕು. ತಮ್ಮ ಕರ್ತವ್ಯಗಳ ಕಡೆಗೆ ಗಮನ ಕೊಡಬೇಕಲ್ಲದೆ ನಿರಂಕುಶವಾಗಿ ವರ್ತಿಸಬಾರದು. ನಿಸ್ಪೃಹತೆ, ವಿನಯ, ಪ್ರಾಮಾಣಿಕತೆ ಮತ್ತು ವಿಧೇಯತೆಗಳು ಆದರ್ಶ ಅಧಿಕಾರಿಯ ಗುಣಗಳು. ಪ್ರಚಾರ-ಪ್ರಸಿದ್ಧಿಗೆಳಸದೆ ಎಲೆಮರೆಯ ಕಾಯಿಯಂತೆ ಅವನು ಮೌನದಿಂದ ತನ್ನ ಸೇವೆಯನ್ನು ಮಾಡಬೇಕು. ಸರ್ವಿಸ್ ರೂಲ್ಸುಗಳು ಇಂದಿನ ಸಿವಿಲ್ ಸರ್ವಿಸಿನ ಒಂದು ಮುಖ್ಯ ಲಕ್ಷಣ.

ದಕ್ಷತೆಯು ಸಿವಿಲ್ ಸರ್ವಿಸಿನ ಇನ್ನೊಂದು ಲಕ್ಷಣ. ದಕ್ಷ ಅಧಿಕಾರಿಗಳನ್ನು ಆರಿಸುವುದಕ್ಕೂ, ಅವರ ಬಡ್ತಿ, ವರ್ಗಾವರ್ಗಿ ಮುಂತಾದವುಗಳ ಬಗ್ಗೆ ಮಾರ್ಗದರ್ಶನ ಮಾಡುವುದಕ್ಕೂ ಪ್ರತಿ ಸರಕಾರದಲ್ಲಿ 'ಸಿವಿಲ್ ಸರ್ವಿಸ್ ಕಮಿಶನ್'

ಅಥವಾ ' ಪಬ್ಲಿಕ್ ಸರ್ವಿಸ್ ಕಮಿಶನ್ ' ಎಂಬ ಸಂಸ್ಥೆಯಿರು ತ್ತದೆ. ಎಲ್ಲಿ ಅಂತಹ ಸಂಸ್ಥೆ ಇರುವುದಿಲ್ಲವೋ ಅಲ್ಲಿ ಆಡಳಿತದ ಸ್ಥಿತಿಗತಿಗಳು ಚನ್ನಾಗಿವೆ ಎಂದು ಹೇಳುವುದು ಕಷ್ಟ. ಈಗ ನೂರು ವರ್ಷಗಳ ಕೆಳಗೆ ಬ್ರಿಟನ್ನಿನಲ್ಲಿ ಸರಕಾರಿ ನೇಮಕಗಳ ವಿಷ ಯದಲ್ಲಿ ತುಂಬ ಭ್ರಷ್ಟಾಚಾರವಿತ್ತು. ನೇಮಕಗಳು ತೃಪ್ತಿಕರ ವಾಗಿ ಆಗುತ್ತಿರಲಿಲ್ಲ. ಆದರೆ ಸುಧಾರಣೆಗಳಾಗಿ ಪರಿಸ್ಥಿತಿ ಕ್ರಮೇಣ ತಿಳಿಯಾಯಿತು. ೧೮೫೫ರಲ್ಲಿ ಸಿವಿಲ್ ಸರ್ವಿಸ್ ಸಂಸ್ಥೆಯು ಅಲ್ಲಿ ಜನ್ಮತಾಳಿ ಇಂದಿಗೂ ಅದು ಚನ್ನಾಗಿ ಕೆಲಸ ಮಾಡುತ್ತಿದೆ. ಬ್ರಿಟನ್ನು ಅಮೇರಿಕೆಗಳಲ್ಲಿ ಪಬ್ಲಿಕ್ ಸರ್ವಿಸ್ ಕಮಿಶನ್ನುಗಳಿರುವಂತೆ ನಮ್ಮ ದೇಶದಲ್ಲಿಯೂ 'ಲೋಕಸೇವಾ ಆಯೋಗ ' ವೆಂಬ ಸಂಸ್ಥೆಯು ಕೇಂದ್ರದಲ್ಲಿಯೂ ರಾಜ್ಯಗಳ ಲ್ಲಿಯೂ ಕಾರ್ಯ ಮಾಡುತ್ತಿದೆ. ಸರಕಾರಿ ಅಧಿಕಾರಿಗಳನ್ನು ನೇಮಿಸುವುದು, ಅವರಿಗೆ ಬಡ್ತಿ ಕೊಡುವದು, ಅವರಲ್ಲಿ ಶಿಸ್ತು, ಶೀಲಗಳನ್ನು ನೆಲೆಗೊಳಿಸುವುದು, ಅವರಲ್ಲಿ ಅತೃಪ್ತಿ ಮತ್ತು ಅಸಮಾಧಾನಗಳಿರದಂತೆ ನೋಡಿಕೊಳ್ಳುವುದು— ಇವೇ ಮೊದ ಲಾದ ವಿಷಯಗಳಲ್ಲಿ ಸಲಹೆಯನ್ನೀಯುವುದು ಪಬ್ಲಿಕ್ ಸರ್ವಿಸ್ ಕಮೀಷನ್‌ಗಳ ಕರ್ತವ್ಯ. ಭಾರತದಲ್ಲಿ ಲೋಕಸೇವಾ ಆಯೋಗಗಳ ಸಲಹೆಯನ್ನು ಸರಕಾರವು ಅಂಗೀಕರಿಸಬೇಕೆಂಬ ಕಡ್ಡಾಯವಿಲ್ಲ. ಆದರೆ ಸರಕಾರವು ಆಯೋಗದ ಸಲಹೆಯನ್ನು ತಿರಸ್ಕರಿಸಿದಾಗ ಸಮಜಾಯಿಸಿ ಕೊಡಬೇಕು. ಪ್ರತಿವರ್ಷ ಹೊರ ಬೀಳುವ ಆಯೋಗದ ವರದಿಯನ್ನು ಆಯಾಯ ಶಾಸನ

ಸಭೆಯ ಮುಂದಿಟ್ಟಾಗ ಶಾಸನಸಭಾ ಸದಸ್ಯರು ಅದನ್ನು ಟೀಕಿಸಿ ಇಲ್ಲವೆ ಪ್ರಶಂಸಿಸಿ ಮಾತಾಡಲು ಅವಕಾಶವಿದೆ.

ಮಂತ್ರಿ-ಅಧಿಕಾರಿಗಳ ಸಂಬಂಧ ಹೇಗಿರಬೇಕೆಂಬುದು ಅತಿ ಮುಖ್ಯವಾದ ಸಮಸ್ಯೆ. ಪ್ರಜಾಪ್ರಭುತ್ವದಲ್ಲಿ ಮಂತ್ರಿಗಳು ಸಾಧಾರಣವಾಗಿ ಪರಿಣತರಲ್ಲ. ಅವರು ಜನಸಾಮಾನ್ಯರ ಪ್ರತಿನಿಧಿಗಳು. ರೈತರು, ಕೂಲಿಕಾರರು, ವಕೀಲರು, ಪತ್ರಿಕೋದ್ಯಮಿಗಳು, ವರ್ತಕರು. ರಾಜಕೀಯವನ್ನೇ ಜೀವನೋಪಾಯವಾಗಿ ಮಾಡಿಕೊಂಡಿರುವ ರಾಜಕಾರಣಿಗಳು ಚುನಾವಣೆಯಲ್ಲಿ ಗೆದ್ದು ಮಂತ್ರಿಗಳಾಗುತ್ತಾರೆ. ಇವರಿಗೆ ಆಡಳಿತದ ಪ್ರಶ್ನೆಗಳು ಸುಲಭವಾಗಿ ಅರ್ಥವಾಗುವುದಿಲ್ಲ. ಜನತೆಯ ಕಷ್ಟ-ಸುಖಗಳು ಇವರಿಗೆ ಗೊತ್ತು ಎಂಬ ಕಾರಣದಿಂದಲೂ ಜನರನ್ನು ಪ್ರತಿನಿಧಿಸುವವರು ಎಂಬ ದೃಷ್ಟಿಯಿಂದಲೂ ಇವರಿಗೆ ಸರಕಾರ ರಚಿಸಲು ಹಕ್ಕಿದೆ. ಮಂತ್ರಿಗಳು ತಜ್ಞರಲ್ಲ; ಕಸಬುದಾರರಲ್ಲ. ಅಧಿಕಾರಿಗಳಾದರೋ ಕಸಬುದಾರರು; ಸುಶಿಕ್ಷಿತರು, ಮತ್ತು ಆಡಳಿತದಲ್ಲಿ ತರಬೇತಿ ಹೊಂದಿ ಅನುಭವ ಪಡೆದವರು. ಆಡಳಿತ ಯಂತ್ರದಲ್ಲಿ ಯಾವ ಯಾವ ಭಾಗದಲ್ಲಿ ಯಾವ ಯಾವ ಮೊಳೆ ಹೇಗಿದೆ ಎಂಬುದು ಅವರಿಗೆ ಚನ್ನಾಗಿ ಗೊತ್ತು. ಆಡಳಿತವು ಸರಕಾರದ ಧ್ಯೇಯ ಧೋರಣೆಗಳನ್ನು ಎಷ್ಟರಮಟ್ಟಿಗೆ ಕಾರ್ಯಗತ ಮಾಡಬಹುದು, ಎಷ್ಟು ಕಾಲ ಬೇಕು, ಎಷ್ಟು ಹಣ ಬೇಕು ಇತ್ಯಾದಿ ಸಂಕೀರ್ಣ ಪ್ರಶ್ನೆಗಳನ್ನು ಕ್ಷಣಮಾತ್ರದಲ್ಲಿ ಲೆಕ್ಕಾಚಾರಮಾಡಿ ಹೇಳುವ ಚಾಕಚಕ್ಯತೆ ಮತ್ತು ಪರಿಶ್ರಮ ಈ ಪರಿಣತರಿಗಿರುತ್ತದೆ.

ಸರಕಾರಿ ಆಡಳಿತ ಸುಗಮವಾಗಿ ಸಾಗಲು ಮಂತ್ರಿ ಮತ್ತು ಅಧಿಕಾರಿಗಳಲ್ಲಿ ಸಾಮರಸ್ಯವಿರಬೇಕಾದದ್ದು ಆವಶ್ಯಕ. ಮಂತ್ರಿಗಳು ಜನತಾ ಪ್ರತಿನಿಧಿಗಳು; ಅವರ ಬೆಂಬಲ ವಿಶ್ವಾಸ ಪಡೆದ ಲೋಕಪ್ರತಿನಿಧಿಗಳು, ಅಧಿಕಾರಿಗಳು ಆಡಳಿತತಜ್ಞರು. ಅಧಿಕಾರಿಗಳಿಗೆ ತಮ್ಮ ಇಲಾಖೆಯೆಂಬ ಸಂಕುಚಿತ ದೃಷ್ಟಿ ಇರುತ್ತದೆ, ಮಂತ್ರಿಗಳಾದರೋ ಸಮಗ್ರ ಆಡಳಿತದ ಅಥವಾ ರಾಷ್ಟ್ರದ ವಿಶಾಲ ದೃಷ್ಟಿಯಿಂದ ಕೂಡಿರುತ್ತಾರೆ. ಅಧಿಕಾರಿಗಳು ಅರಣ್ಯದಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರಂತೆ. ಅವರ ಕಣ್ಣಿಗೆ ತಮ್ಮ ಹತ್ತಿರದ ನಾಲ್ಕು ಗಿಡಗಳು ಕಾಣಿಸುವವೇ ಹೊರತು ಇಡೀ ಅರಣ್ಯದ ಪೂರ್ಣ ದೃಷ್ಟಿ ಅವರಿಗಿರದು. ಮಂತ್ರಿಗಳು ಅಧಿಕಾರಿಗಳ ದೃಷ್ಟಿಯನ್ನು ವಿಶಾಲಗೊಳಿಸಿ ಜನತೆಯ ನಿಜವಾದ ಸಮಸ್ಯೆಯೇನು ಎಂಬುದನ್ನು ಅಧಿಕಾರಿಗಳಿಗೆ ತಿಳಿಯಪಡಿಸುತ್ತಾರೆ. ಮಂತ್ರಿಗಳಿಗೆ ಜನಸಂಪರ್ಕವಿರುವಂತೆ ಆಡಳಿತದಲ್ಲಿರುವ ಉನ್ನತಾಧಿಕಾರಿಗಳಿಗೆ ಪ್ರಜಾಸಂಪರ್ಕವಿರುವುದು ವಿರಳ. ಅಧಿಕಾರಿಗಳು ಮತ್ತು ಮಂತ್ರಿಗಳು ಪರಸ್ಪರ ಪೂರಕವಾಗಿ ಕೆಲಸಮಾಡಬೇಕು. ಪರಸ್ಪರ ಸಹಕಾರ ಬಹಳ ಮುಖ್ಯ. ತಂತಮ್ಮ ಪಾತ್ರಗಳನ್ನು ಚನ್ನಾಗಿ ಅರಿತುಕೊಂಡರೆ ಅವರಲ್ಲಿ ಯಾವ ಘರ್ಷಣೆಗಳೂ ಉಂಟಾಗುವದಿಲ್ಲ. ಮಂತ್ರಿಗಳು ಸರಕಾರದ ನೀತಿಯನ್ನು ನಿರ್ಧರಿಸಬೇಕು. ಈ ನಿರ್ಧಾರಗಳನ್ನು ಅಧಿಕಾರಿಗಳು ಅನುಷ್ಠಾನಕ್ಕೆ ತರಬೇಕು. ಮಂತ್ರಿಗಳಿಗೆ ಒಂದು ಸಮಸ್ಯೆಯ ಬಗ್ಗೆ ಪೂರ್ಣ ಸಮಾಚಾರವನ್ನೂ ಸಲಹೆಯನ್ನೂ ಅಧಿಕಾರಿಗಳು ಬಿಚ್ಚು ಮನಸ್ಸಿನಿಂದ ಕೊಡಬೇಕು. ಸರಕಾರ

ಕೈಕೊಳ್ಳುವ ಯೋಜನೆಗಳ ಸಾಧಕ–ಬಾಧಕಗಳನ್ನು ತಿಳಿಸಬೇಕು. ಮಂತ್ರಿಗಳು ಅಧಿಕಾರಿಗಳು ಕೊಟ್ಟ ಸಲಹೆಯನ್ನು ಸ್ವೀಕರಿಸ ಬಹುದು; ಅಥವಾ ಸ್ವೀಕರಿಸದಿರಬಹುದು. ಅಧಿಕಾರಿಗಳ ಸಲಹೆಯನ್ನು ಪರಿಶೀಲಿಸಿ ಮಂತ್ರಿಗಳು ಒಂದು ನಿರ್ಧಾರಕ್ಕೆ ಬಂದಮೇಲೆ ಅಧಿಕಾರಿಗಳು ನಿಷ್ಠೆಯಿಂದ ಆ ನಿರ್ಧಾರವನ್ನು ಜಾರಿಗೆ ತರತಕ್ಕದ್ದು. ಪ್ರಜಾಪ್ರಭುತ್ವದಲ್ಲಿ ಮಂತ್ರಿ–ಅಧಿಕಾರಿ ಗಳ ಸಂಬಂಧ ಯಜಮಾನ–ಆಳುಗಳ ಸಂಬಂಧದಂತೆ ಇರುತ್ತದೆ. ಅಧಿಕಾರಿಗಳು ಸೇವಕರು ಹಾಗು ಸಲಹೆಗಾರರೇ ವಿನಃ ತಾವೇ ಸರಕಾರವಲ್ಲ. ಅವರು ಸರಕಾರದ ನಿರ್ಣಯಗಳನ್ನು ಶಿರಸಾ ವಹಿಸಿ ನಡೆಸಿಕೊಡಬೇಕು. ಸಾಮಾನ್ಯವಾಗಿ ಮಂತ್ರಿಗಳು ನೂರಕ್ಕೆ ೯೯ರಂತೆ ಅಧಿಕಾರಿಗಳ ಸಲಹೆಯನ್ನು ಪುರಸ್ಕರಿಸುತ್ತಾರೆ. ಉನ್ನತಾಧಿಕಾರಿಗಳು ತಮ್ಮ ಸ್ವಾರ್ಥಸಾಧನೆಗಾಗಿ ಮಂತ್ರಿಗಳ ಕೈಯಲ್ಲಿ ಕೌಲೆತ್ತಾಗಬಾರದು; ಅಥವಾ ಕೇವಲ ತಕರಾರು ಮಾಡುವ ಇಲ್ಲವೇ ಕೊಕ್ಕೆ ಹಾಕುವ ಯಂತ್ರಗಳಾಗಬಾರದು. ಪರಸ್ಪರ ತಿಳುವಳಿಕೆ, ಸಹಕಾರ ಮನೋಭಾವ ಮತ್ತು ನ್ಯಾಯ ದೃಷ್ಟಿ ಇಲ್ಲದಿದ್ದರೆ ಮಂತ್ರಿ ಮತ್ತು ಸರಕಾರಿ ಕಾರ್ಯದರ್ಶಿ ಗಳು ಅತ್ತೆ–ಸೊಸೆಯರಂತೆ ಕಾದಾಡಬೇಕಾದೀತು ! ಇದು ಆಡ ಳಿತಕ್ಕೂ ದೇಶಕ್ಕೂ ಅಪಾಯಕರ. ಮಂತ್ರಿಗಳು ಸಹ ಸರ್ವಾಧಿ ಕಾರಿಗಳಂತೆ ನಡೆದುಕೊಳ್ಳಬಾರದು. ಉಚ್ಚ–ನೀಚ ಭಾವನೆ ಗಳಿಗೆ ಅವಕಾಶವೀಯಕೂಡದು. ಅಧಿಕಾರಿಗಳನ್ನು ಗೌರವದಿಂದ ಕಾಣಬೇಕು. ಆದರ್ಶಮಂತ್ರಿ ಮತ್ತು ಆದರ್ಶ ಕಾರ್ಯದರ್ಶಿ ಗಳು ದೊರಕುವುದು ಆಯಾ ದೇಶದ ಸಂಸ್ಕೃತಿಯನ್ನವಲಂಬಿಸಿದೆ.

ಸರಕಾರಿ ಅಧಿಕಾರಿಗಳ ಪಾತ್ರ ಸ್ವತಂತ್ರಭಾರತದಲ್ಲಿ ಕ್ರಾಂತಿಕಾರಕವಾಗಿ ಬದಲಾಯಿಸಿದೆ. ಬ್ರಿಟಿಶರು ನಮ್ಮನ್ನಾಳುತ್ತಿದ್ದಾಗ ಅಧಿಕಾರಿಗಳು ಈ ದೇಶದ ಶಾಸನಸಭೆಗಾಗಲೀ ಪ್ರಜಾವರ್ಗಕ್ಕಾಗಲೀ ಜವಾಬ್ದಾರರಾಗದೇ ಬ್ರಿಟಿಷ್ ದೊರೆಗಳಿಗೆ ಹೊಣೆಗಾರರಾಗಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ಐ. ಸಿ.ಎಸ್. ಅಧಿಕಾರಿಗಳೆಂದರೆ ಅವರೇ ಸರಕಾರವಾಗಿದ್ದರು. ಅವರ ಸಂಬಳ, ವರ್ಗಾವಣೆ, ಬಡ್ತಿ, ಮೊದಲಾದವುಗಳ ಮೇಲೆ ಭಾರತೀಯರಿಗೆ ಯಾವ ಅಧಿಕಾರವೂ ಇರಲಿಲ್ಲ. ಆದರೆ ಈಗ ಪರಿಸ್ಥಿತಿ ಬದಲಾಯಿಸಿದೆ. ಅಧಿಕಾರಿಗಳು ಹಿಂದಿನ ಕಾಲದ ಪ್ರತ್ಯೇಕ ಮನೋಭಾವ ಮತ್ತು ದರ್ಪಗಳನ್ನು ಪ್ರದರ್ಶಿಸುವುದು ಸಾಧ್ಯವಿಲ್ಲ; ಸೂಕ್ತವೂ ಅಲ್ಲ. ಅವರು ತಮ್ಮ 'ಮಡಿ' ಭಾವನೆಯನ್ನು ತೊರೆದು ಜನರೊಂದಿಗೆ ಬೆರೆಯಬೇಕಾಗಿದೆ. ಅಧಿಕಾರಿ ಮತ್ತು ಅಧಿಕಾರೇತರ ಎಂಬ ಭಾವನೆ ಈಗ ಮಾಯವಾಗುತ್ತಿದೆ. ಮಂತ್ರಿಗಳು, ಶಾಸನಸಭಾಸದಸ್ಯರು ಮತ್ತು ಅಧಿಕಾರ ವರ್ಗದವರು ಸರಕಾರ ಮತ್ತು ದೇಶದ ಹಿತಸಾಧನೆಯ ಕಾರ್ಯದಲ್ಲಿ ಸಮ ಪಾಲುಗಾರರು— ಎಂಬ ಭಾವನೆ ಬೆಳೆಯುತ್ತಿದೆ. ಪ್ರಜಾಹಿತರಾಜ್ಯದಲ್ಲಿ ಅಧಿಕಾರಿ ವರ್ಗದವರು ತಾವು ಪ್ರಜೆಗಳ ಸೇವಕರು ಎಂಬುದನ್ನು ಅರಿತು ಕಾರ್ಯನಿರ್ವಹಿಸಬೇಕಾಗಿದೆ. ಪ್ರಜೆಗಳು ಅಧಿಕಾರಿಗಳೊಡನೆ ಸಹಕರಿಸಿ ಸಾರ್ವಜನಿಕ ಹಿತಕ್ಕಾಗಿ ಶ್ರಮಿಸಲು ಮುಂದೆ ಬಂದರೆ ಅಧಿಕಾರಿಗಳ ಕಾರ್ಯ ಸುಲಭವಾಗುತ್ತದೆ. ಒಟ್ಟಿನಲ್ಲಿ ಪ್ರಜಾಪ್ರಭುತ್ವದಲ್ಲಿ ಸಿವಿಲ್ ಸರ್ವಿಸ್ ಸಂಸ್ಥೆಯ ಪಾತ್ರ ಬಹಳ ಮಹತ್ವದ್ದು. ಸಿವಿಲ್ ಸರ್ವಿ

ಸಿನ ಸಹಾಯ, ಸಹಕಾರವಿಲ್ಲದೆ ಸರಕಾರವು ಒಂದು ಕ್ಷಣವೂ ಕೆಲಸಮಾಡಲಾರದು. ಒಂದು ದೇಶದ ರಾಜಾದಾಯದ ಬಹು ಭಾಗವು ಅಧಿಕಾರಿಗಳ ಸಂಬಳ ಸಾರಿಗೆಗಳಿಗಾಗಿಯೇ ವಿನಿಯೋಗ ವಾಗುತ್ತದೆಂಬುದನ್ನು ಮನಗಂಡರೆ ನಮಗೆ ಸಿವಿಲ್ ಸರ್ವಿಸಿನ ಬಗ್ಗೆ ಸರಿಯಾದ ಕಲ್ಪನೆಯಾದೀತು.

ಪ್ರಪಂಚ ಪ್ರತಿ ಸರಕಾರವು ತನ್ನ ಆದಾಯದ ಮುಖ್ಯ ಭಾಗವನ್ನು ಸಿವಿಲ್ ಸರ್ವಿಸಿಗಾಗಿ ಖರ್ಚುಮಾಡುತ್ತಿದೆ. ಪ್ರತಿದಿನ ಸರಕಾರದ ಕಾರ್ಯಕ್ಷೇತ್ರ ವಿಸ್ತಾರವಾಗುತ್ತಿರುವುದ ರಿಂದ ಸರಕಾರವು ತನ್ನ ನಿರ್ಧಾರ ಮತ್ತು ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರಲು ಸಿವಿಲ್ ಸರ್ವಿಸನ್ನು ಅವ ಲಂಬಿಸದೆ ಗತ್ಯಂತರವಿಲ್ಲ. ಆದರೆ ಸಿವಿಲ್ ಸರ್ವಿಸಿನ ಮೇಲೆ ಕೆಲವು ಆರೋಪಗಳನ್ನು ಹೊರಿಸಿ ಟೀಕಿಸಲಾಗಿದೆ. ಒಂದನೆಯ ದಾಗಿ ಸರಕಾರಿ ನೌಕರರಲ್ಲಿ ಯಾವಾಗಲೂ ಸುರಕ್ಷಿತತೆಯ ಚಿಂತೆಯೇ ವಿನಾ ಧೈರ್ಯ ಸಾಹಸಗಳಿಂದ ಮುಂತೊಡಗಿ ಕೆಲಸ ಮಾಡುವ ಪ್ರವೃತ್ತಿ ಕಡಿಮೆ ಎಂಬ ಆಕ್ಷೇಪವಿದೆ. ಎರಡನೆಯ ದಾಗಿ, ಪ್ರತ್ಯೇಕತಾ ಮನೋಭಾವ ಕೆಲವರಲ್ಲಾದರೂ ಎದ್ದು ಕಾಣುತ್ತಿದೆ. ಜೊತೆಗೆ ಒಂದು ಬಗೆಯ ದರ್ಪವನ್ನು ಬೀರುವ ಮನೋವೃತ್ತಿ ಅವರಲ್ಲಿ ಬೆಳೆಯುತ್ತದೆ. ಮೂರನೆಯದಾಗಿ, ಅವರು ಪದವೀಧರರಾದಾಗ ಸಂಪಾದಿಸಿದ ಅರಿವೇ ಅವರಿಗೆ ತಿಳಿವಿನ ಬುತ್ತಿ. ಇಪ್ಪತ್ತು ವರ್ಷಗಳ ಹಿಂದೆ ಓದಿದ್ದೇ ಅವರ ಜ್ಞಾನದ ಹಿನ್ನೆಲೆ. ಸಿವಿಲ್ ಸರ್ವಿಸು ಲಿಸ್ಟನ್ನು ಬಿಟ್ಟರೆ ಏನನ್ನೂ ಹೊಸದಾಗಿ ಓದದಿರುವ ಅಧಿಕಾರಿಗಳೇ ಹೆಚ್ಚು ಎಂದು

ಒಬ್ಬರು ಹಾಸ್ಯಪೂರಿತವಾಗಿ ಹೇಳಿದ್ದಾರೆ. ಈ ಆರೋಪಗಳಲ್ಲಿ ಹುರುಳಿಲ್ಲದೆ ಇಲ್ಲ. ಈ ಸಮಸ್ಯೆಗಳನ್ನು ಬಗೆಹರಿಸುವುದು ಎಲ್ಲರ ಕರ್ತವ್ಯವಾಗಿದೆ. ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಕ್ರಮಗಳನ್ನು ಹುಡುಕುವುದರಲ್ಲಿ ಪ್ರತಿ ರಾಷ್ಟ್ರವೂ ಇಂದು ಗಮನವೀಯಬೇಕಾಗಿದೆ.

---

# ೭. ಸಮಾಜ ಮತ್ತು ಆಡಳಿತ

“ ಪ್ರಜಾಹಿತ ರಾಜ್ಯ ” ಎಂಬುವ ಮಾತು ಇತ್ತಿತ್ತಲಾಗಿ ಹೆಚ್ಚು ಪ್ರಚಾರವಾಗುತ್ತಿದೆ. ರಾಜಕೀಯದಲ್ಲಿ ಜನರನ್ನು ಮೋಸಗೊಳಿಸಲು ಇದನ್ನು ಧಾರಾಳವಾಗಿ ಬಳಸಲಾಗುತ್ತಿದೆ ಎಂಬ ಆರೋಪಣೆ ಇದ್ದಾಗ್ಯೂ ಪ್ರಜಾಹಿತರಾಜ್ಯವೆಂಬುವ ಮಾತು ಅರ್ಥಗರ್ಭಿತವಾದದ್ದು. ಮೊಗಲರ ಮತ್ತು ಬ್ರಿಟಿಷರ ಕಾಲದಲ್ಲಿ ಭಾರತವು ಪ್ರಜಾರಾಜ್ಯವೂ ಆಗಿರಲಿಲ್ಲ; ಪ್ರಜಾಹಿತ ರಾಜ್ಯವೂ ಆಗಿರಲಿಲ್ಲ. ಅದು ಪೋಲೀಸ ರಾಜ್ಯವಾಗಿತ್ತೆನ್ನ ಬಹುದು. ಜನರ ಆಸ್ತಿ ಮತ್ತು ಪ್ರಾಣಗಳಿಗೆ ಧಕ್ಕೆಯಾಗದಂತೆ ರಕ್ಷಣೆ ನೀಡುವ ರಾಜ್ಯವನ್ನು ಸುರಕ್ಷತಾ ರಾಜ್ಯ ಅಥವಾ ಪೋಲೀಸ್ ರಾಜ್ಯವೆನ್ನಲಾಗುತ್ತದೆ.

ಜನಹಿತದ ಕಾರ್ಯಗಳನ್ನು ಕೈಗೊಳ್ಳದೆ ಕೇವಲ ಜನರ ಪ್ರಾಣ ಮತ್ತು ಆಸ್ತಿಯನ್ನು ರಕ್ಷಿಸುವ “ ಕಾವಲು ರಾಜ್ಯವು ” ೨೦ನೆಯ ಶತಮಾನದಲ್ಲಿ ಸವಕಲು ನಾಣ್ಯವಾಗಿದೆ. ಜನತೆಯ ಅಭ್ಯುದಯವನ್ನು ಸಾಧಿಸಲು ಪಣತೊಟ್ಟು ಶ್ರಮಿಸುವ “ ರೊಟ್ಟಿಯ ರಾಜ್ಯ ” ದ ಘೋಷಣೆ ಇಂದು ಜನಪ್ರಿಯ ವಾಗಿದೆ. ಜನಜೀವನವನ್ನು ಸರ್ವಾಂಗಸುಂದರವನ್ನಾಗಿ ಮಾಡಲು ಇಂದು ಸರಕಾರಗಳು ಯೋಜನೆಗಳ ಮೂಲಕ ಹೆಣಗಾಡುವುದು ಸಾಮಾನ್ಯ ಸಂಗತಿ. ಪ್ರಜಾಹಿತ ರಾಜ್ಯ

ದಲ್ಲಿ ಜನರಿಗೆ ಅತ್ಯವಶ್ಯಕವಾದ ಅನ್ನ, ನೆರಳು ಮತ್ತು ಅರಿವೆಗಳು ಎಲ್ಲರಿಗೂ ಸಮೃದ್ಧಿಯಾಗಿ ಸಿಗಬೇಕು. ಸರಕಾರವು ಅನ್ನ, ವಸತಿ ಮತ್ತು ಬಟ್ಟೆಗಳನ್ನು ಒದಗಿಸುವ ಹೊಣೆ ಹೊರತಕ್ಕದ್ದು. ಉಪವಾಸ, ರೋಗ, ಬಡತನ, ನಿರುದ್ಯೋಗ ಮೊದಲಾದ ಅನಿಷ್ಟಗಳನ್ನು ನಿವಾರಿಸುವ ರಾಜ್ಯವೇ ಪ್ರಜಾಹಿತರಾಜ್ಯ.

ಭಾರತ ಸಂವಿಧಾನವು ಪ್ರಜಾಹಿತ ರಾಜ್ಯವನ್ನು ಧ್ಯೇಯವನ್ನಾಗಿ ಪರಿಗಣಿಸಿದೆ. ಆ ದಿಸೆಯಲ್ಲಿ ಭಾರತ ಸರಕಾರವು ತನ್ನ ಕೈಲಾದಮಟ್ಟಿಗೆ ಜನಹಿತ ಕಾರ್ಯಗಳನ್ನು ಕೈಕೊಂಡಿದೆ. ಈ ವರೆಗೆ ಕೇವಲ " ಕಾವಲುರಾಜ್ಯ " ವಾಗಿದ್ದ ಭಾರತವು " ರೊಟ್ಟಿಯ ರಾಜ್ಯ " ವಾಗಿ ಪರಿವರ್ತನೆಗೊಳ್ಳುತ್ತಿದೆ. ಜನಹಿತ ರಾಜ್ಯದ ಧ್ಯೇಯವು ಸಂಪೂರ್ಣವಾಗಿ ಕಾರ್ಯಗತವಾಗಲು ಆಡಳಿತವು ಯಾವ ರೀತಿ ವರ್ತಿಸಬೇಕೆಂಬುದು ನಾವು ತಿಳಿದುಕೊಳ್ಳಬೇಕಾದ ವಿಷಯ.

ಆಡಳಿತವೆಂದರೆ ಸರಕಾರ ಅಥವಾ ಮಂತ್ರಿಮಂಡಲದ ಕೈಯೊಳಗಿನ ಒಂದು ಉಪಕರಣ. ಆಡಳಿತ ಸೂತ್ರಗಳನ್ನು ಹಿಡಿಯುವವರು ಜನತೆಯೇ; ನಮ್ಮ ಜನರೇ ಆಡಳಿತಗಾರರಾಗಿ ಕೆಲಸ ಮಾಡುತ್ತಾರೆ. ಆಡಳಿತವು ಸರಕಾರದ ಆಳು ಎಂಬುದು ಬ್ರಿಟಿಷ್ ಕಲ್ಪನೆ. ಆಡಳಿತ ಯಂತ್ರವನ್ನು ಒಂದು ಪಿರಮಿಡ್ಡಿಗೆ ಹೋಲಿಸಬಹುದು. ವಿವಿಧ ಆಡಳಿತ ಶಾಖೆಗಳ ತಲೆಯಾಳುಗಳಾಗಿ ಉಚ್ಚ ಅಧಿಕಾರಿಗಳಿರುತ್ತಾರೆ. ಆಡಳಿತ ಯಂತ್ರದ ಮುಖ್ಯ ಸೂತ್ರಧಾರಿಗಳಿವರು. ರಾಜ್ಯಾಡಳಿತದ

ಕೇಂದ್ರ ಕಚೇರಿ ಅಥವಾ ಸೆಕ್ರೆಟರಿಯೇಟ್ ಎಂಬ ಸಂಸ್ಥೆಯ ಮುಖ್ಯ ಅಧಿಕಾರಿಗಳೇ ಸರಕಾರೀ ಕಾರ್ಯದರ್ಶಿಗಳು ಮತ್ತು ಉಪಕಾರ್ಯದರ್ಶಿಗಳು. ಸರಕಾರದ ಮುಖ್ಯ ಕಾರ್ಯದರ್ಶಿ ಆಡಳಿತಕ್ಕೆ ಸೂತ್ರಧಾರಿ. ಒಟ್ಟಿನಲ್ಲಿ ಸಹಸ್ರಾರು ನೌಕರರನ್ನೊಳಗೊಂಡ ಆಡಳಿತವರ್ಗದ ಸಹಾಯದಿಂದ ಸರಕಾರವು ಜನಪದ ಅಭಿವೃದ್ಧಿಯ ಕಾರ್ಯಗಳನ್ನು ಕೈಕೊಳ್ಳುತ್ತದೆ. ಸಾರ್ವಜನಿಕ ಸೇವೆಯೇ ಆಡಳಿತದ ಪರಮಾದರ್ಶ.

ಇಂದಿನ ಕಾಲದಲ್ಲಿ ಆಡಳಿತದ ಪಾತ್ರ ಬಹಳ ಪ್ರಾಮುಖ್ಯವಾಗಿ ಬರುತ್ತಿದೆ. ಸರಕಾರವು ಜನರ ಹಿತಸಾಧನೆಗಾಗಿ ಬಹುಮುಖ ಸೇವೆಯನ್ನು ಮಾಡುತ್ತಿರುವಾಗ ಸರಕಾರದ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರುವ ಹೊಣೆ ಆಡಳಿತದ ಮೇಲಿದೆ. ಆಡಳಿತದ ಸಹಕಾರ, ಸಹಾಯ ಮತ್ತು ಹೃತ್ಪೂರ್ವಕ ಸೇವೆಗಳಿಲ್ಲದೆ ಸರಕಾರ ಏನನ್ನೂ ಮಾಡಲಾರದು. ಜನಹಿತ ರಾಜ್ಯದಲ್ಲಿ ಆಡಳಿತಗಾರನು ಕೇವಲ ಕಂದಾಯ ವಸೂಲು ಮಾಡುವ ಸರಕಾರದ ಆಳಾಗದೆ ಜನ ಕಲ್ಯಾಣವನ್ನು ಸಾಧಿಸುವ ಕಾರ್ಯದಲ್ಲಿ ಪಾಲುಗಾರನಾಗುತ್ತಾನೆ ಅಧಿಕಾರವನ್ನು ಚಲಾಯಿಸುವ ಮನೋಭಾವಕ್ಕೆ ಬದಲಾಗಿ ದೇಶೋನ್ನತಿಗೆ ದುಡಿಯಬೇಕೆಂಬ ಸೇವಾತತ್ಪರತೆ ಅವನಲ್ಲಿ ಕಂಡು ಬರಬೇಕು.

ಇಂದಿನ ಆಡಳಿತದ ಕಾರ್ಯಕಲಾಪಗಳು ವಿಸ್ತಾರವಾಗಿರುವಂತೆ ಆಡಳಿತ ವರ್ಗದ ಸಂಖ್ಯೆಯೂ ಬೆಳೆದಿದೆ. ಸರಕಾರಿ ನೌಕರರ ಸಂಖ್ಯೆ ಸೈನಿಕರ ಸಂಖ್ಯೆಯಂತೆ ಬೆಳೆಯು

ತ್ತಿದೆ. ಇಂದಿನ ಸರಕಾರವು ಲಕ್ಷಾಂತರ ಜನರಿಗೆ ನೌಕರಿ ಕೊಡುವ ದೊಡ್ಡ ಧಣಿಯಾಗಿದೆ. ರಾಜ್ಯಾದಾಯದ ಬಹು ಭಾಗ ನೌಕರರ ಸಂಬಳ ಸಾರಿಗೆಗಳಿಗಾಗಿಯೇ ವೆಚ್ಚವಾಗುವುದು. ಪ್ರಪಂಚದ ಎಲ್ಲ ರಾಜ್ಯಗಳಲ್ಲಿಯೂ ಸರಕಾರಿ ಆಡಳಿತ ವರ್ಗದ ಸಂಖ್ಯೆಯು ದಿನೇ ದಿನೇ ಬೆಳೆಯುತ್ತಿದೆ. ಸರಕಾರವು ಆರ್ಥಿಕ ಮತ್ತು ಸಾಮಾಜಿಕ ಹಿತಸಾಧನೆಯ ಕಾರ್ಯಗಳನ್ನು ಕೈಗೊಳ್ಳುತ್ತಿರುವುದರಿಂದ ಆಡಳಿತವರ್ಗ ಹಿಮಾಲಯ ಸದೃಶವಾಗಿ ಬೆಳೆಯುವುದು ಸ್ವಾಭಾವಿಕವಾದುದು.

ಸೋವಿಯೆಟ್ ರಷ್ಯಾ ಮತ್ತು ಅಮೇರಿಕಾ ದೇಶಗಳ ಮಾರ್ಗ ಭಿನ್ನವಾದರೂ, ಒಂದೇ ಗುರಿಗಾಗಿ ಕೆಲಸ ಮಾಡುತ್ತಿವೆ. ನಿರುದ್ಯೋಗ ನಿವಾರಣೆ, ಹೊಟ್ಟೆ ತುಂಬ ಅನ್ನ, ಕೈತುಂಬ ಸಂಬಳ ಮೊದಲಾದ ಸೌಲಭ್ಯಗಳನ್ನು ಒದಗಿಸಿಕೊಡುವುದು ಅವುಗಳ ಗುರಿ. ದೇಶದ ವ್ಯವಸಾಯ, ವ್ಯಾಪಾರ ಮತ್ತು ಕೈಗಾರಿಕೆಗಳ ಬೆಳವಣಿಗೆಗಳ ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಲು ಅವು ಪ್ರಯತ್ನಿಸುತ್ತಿವೆ.

ಬ್ರಿಟನ್ನಿನ ಕಾರ್ಮಿಕ ಪಕ್ಷವು 'ಪ್ರಜಾಹಿತ' ಘೋಷಣೆಯನ್ನು ಕಾರ್ಯಗತ ಮಾಡಲು ೧೯೪೫ರಿಂದ ೧೯೫೧ರ ವರೆಗೆ ಪ್ರಯತ್ನಪಟ್ಟಿತು. ೧೯೪೫ರ ರಾಷ್ಟ್ರೀಯ ವಿಮಾ ಶಾಸನದ ಮೂಲಕ ನಿರುದ್ಯೋಗ ಸೌಲಭ್ಯ, ಕಾಯಿಲೆ ಸೌಲಭ್ಯಗಳನ್ನು ಒದಗಿಸಲಾಯಿತು. ವಯಸ್ಸಾದ ಮೇಲೆ ಜನ ದುಡಿಯಲು ಅಶಕ್ತರಾಗಿರುವುದರಿಂದ ಸರಕಾರ ಅವರ ಜೀವನವೆಚ್ಚವನ್ನು ನೋಡಿಕೊಳ್ಳುವುದು ಪ್ರಜಾಹಿತ ಕಾರ್ಯ

ವಲ್ಲವೆ ? ಇದೇ ರೀತಿ ಜನತೆಗೆ ವಿವಿಧ ಅನುಕೂಲತೆಗಳನ್ನು ಕಲ್ಪಿಸುವ ಸ್ಫೂರ್ತಿಯಿಂದ ಪ್ರಜಾಹಿತ ರಾಜ್ಯವು ಶ್ರಮಿಸುವುದು. ಬ್ರಿಟನ್ನಿನಲ್ಲಿ ವೈದ್ಯಕೀಯ ವೃತ್ತಿಯನ್ನು ರಾಷ್ಟ್ರೀಕರಿಸಲಾಗಿದೆ. ಉಚಿತ ವೈದ್ಯಕೀಯ ಸೌಲಭ್ಯ ಅಲ್ಲಿ ದೊರೆಯುತ್ತದೆ. ಇದಕ್ಕಾಗಿ ಕೊಂಚ ಕರವನ್ನು ಸಾರ್ವಜನಿಕರು ಕೊಡಬೇಕಾಗುವುದು. ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ರಾಷ್ಟ್ರೀಕರಣವನ್ನು ಜಾರಿಗೆ ತರಲು ಅಧಿಕಾರದಲ್ಲಿದ್ದ ಕಾರ್ಮಿಕ ಪಕ್ಷ ಅಂದು ಪ್ರಯತ್ನಿಸಿತು.

ಭಾರತವು ಕೂಡ ಪ್ರಜಾಹಿತ ರಾಜ್ಯಪಥದಲ್ಲಿ ನಡೆಯಲಾರಂಭಿಸಿದೆ. ಪ್ರಜಾಹಿತ ಸ್ಥಾಪನೆಯು ಒಂದೆರಡು ವರ್ಷಗಳಲ್ಲಿ ಬಗೆಹರಿಯುವ ಸಮಸ್ಯೆಯಲ್ಲ. ಭಾರತದಲ್ಲಿ ದೊಡ್ಡ ನೀರಾವರಿ ಯೋಜನೆಗಳೂ, ರಸ್ತೆಗಳೂ, ಕೈಗಾರಿಕೆಗಳೂ ವಿಕಾಸವಾಗಬೇಕು. ಒಕ್ಕಲುತನವು ಸುಧಾರಿಸಬೇಕು. ಜನರು ದುಡಿಯುವ ಚಟದವರಾಗಬೇಕು. ಅಂದೇ ನಮ್ಮ ನಾಡಿನ ನಿರುದ್ಯೋಗವು ನಿವಾರಣೆಯಾಗಿ ಶಿಕ್ಷಣ ಮೊದಲಾದ ವಿಷಯಗಳಲ್ಲಿ ಭಾರೀ ಕ್ರಾಂತಿಯಾದೀತು. ಪ್ರಜಾಹಿತ ರಾಜ್ಯಸ್ಥಾಪನೆಗಾಗಿ ಪಂಚವಾರ್ಷಿಕ ಯೋಜನೆಗಳ ಮೂಲಕ ಭಾರತ ಸರಕಾರವು ಶ್ರಮಿಸುತ್ತಿದೆ. ಜನಸಂಖ್ಯೆಯ ಮಿತಿ ಮೀರಿದ ಬೆಳವಣಿಗೆ, ಹಣದ ಅಭಾವ ಮತ್ತು ಜನರ ಸೋಮಾರಿತನದಿಂದ ನಮ್ಮ ಅಭ್ಯುದಯವು ಎಷ್ಟು ಶೀಘ್ರವಾಗಿ ಸಾಗಬೇಕಿತ್ತೋ ಅಷ್ಟು ಶೀಘ್ರವಾಗಿ ಸಾಗುತ್ತಿಲ್ಲ.

ಇದು ಯೋಜನಾ ಯುಗ. ಮಾರ್ಗಗಳು ಭಿನ್ನವಾದರೂ ಎಲ್ಲ ಯೋಜನೆಗಳ ಗುರಿ ಒಂದೇ ಆಗಿದೆ. ಜನರ

ಬಾಳಿನ ಮಟ್ಟವನ್ನು ಎತ್ತರಿಸಬೇಕೆಂಬುದು ಸಾಮಾನ್ಯವಾಗಿ ಯೋಜನಾಕಾರರ ಆಶಯವಾಗಿದೆ. ದೇಶದಲ್ಲಿರುವ ಸಕಲ ಸಂಪತ್‌ಮೂಲಗಳನ್ನು ಅಭಿವೃದ್ಧಿಪಡಿಸಿ ದೇಶದ ಉತ್ಪತ್ತಿ ಯನ್ನು ಹೆಚ್ಚಿಸಿದರೆ ನಿರುದ್ಯೋಗವನ್ನು ನಿವಾರಿಸಬಹುದು. ಯೋಜನೆಗಳನ್ನು ಕಾರ್ಯಗತ ಮಾಡಲು ಸರಕಾರವು ಅನೇಕ ತಜ್ಞರ ಸೇವೆಯನ್ನೂ ವೈಜ್ಞಾನಿಕ ಸಾಧನಗಳನ್ನೂ ಬಳಸಿಕೊಳ್ಳ ಬೇಕಾಗಿದೆ. ದೊಡ್ಡ ರಸ್ತೆಗಳು, ದೊಡ್ಡ ಜಲಾಶಯಗಳು, ಭಾರೀ ವಿದ್ಯುಚ್ಛಕ್ತಿ ಯೋಜನೆಗಳು, ಶಿಕ್ಷಣ ಪ್ರಸಾರ, ಸಾರ್ವ ಜನಿಕ ಆರೋಗ್ಯ ಸುಧಾರಣೆ ಇಂತಹ ರಚನಾತ್ಮಕ ಕಾರ್ಯ ಕ್ರಮಗಳಲ್ಲಿ ಇಂದಿನ ಆಡಳಿತವು ತೊಡಗಬೇಕಾಗಿದೆ. ದೇಶದ ಅಭ್ಯುದಯ ಸಾಧನೆಯು ಪ್ರಜಾಹಿತ ರಾಜ್ಯದ ನಿತ್ಯದ ಚಿಂತೆ. ಜನತೆಯ ಶತ್ರುಗಳಾದ ಅವಿದ್ಯೆ, ಆಲಸ್ಯತನ, ರೋಗ ಮತ್ತು ದಾರಿದ್ರ್ಯಗಳನ್ನು ಹೊಡೆದೋಡಿಸುವ ಹೊಣೆ ಇಂದಿನ ಆಡ ಳಿತದ ಮೇಲಿದೆ. ಇದಕ್ಕಾಗಿ ಸಮರ್ಥ ಮತ್ತು ಪ್ರಾಮಾಣಿಕ ರಾದ ಆಡಳಿತಗಾರರು, ಸರಕಾರಿ ನೌಕರರು ಬೇಕು. ಎಷ್ಟೇ ಹಣವಿರಲಿ, ಎಷ್ಟೇ ನೈಸರ್ಗಿಕ ಸಂಪತ್ ಮೂಲಗಳಿರಲಿ, ಸರಿ ಯಾದ ಯೋಜನೆ ಮತ್ತು ನಿಸ್ಪೃಹತೆಯಿಂದ ದುಡಿಯುವ ಅಧಿಕಾರಿಗಳಿರದಿದ್ದರೆ ಆಡಳಿತವು ಯಶಸ್ವಿಯಾಗಲಾರದು. ಆದುದರಿಂದ ಸಾಮಾಜಿಕ ಪರಿವರ್ತನೆಯ ಮಹಾಕಾರ್ಯದಲ್ಲಿ ಅಧಿಕಾರಿಗಳು ತಮ್ಮ ಅಮೌಲ್ಯ ಕಾಣಿಕೆಯನ್ನು ಸಲ್ಲಿಸಬಹು ದಾಗಿದೆ.

ಆದರೆ ನೌಕರರ ಹೆಚ್ಚಿದ ಅಧಿಕಾರ ಮತ್ತು ದಿನೇ ದಿನೇ ಏರುತ್ತಿರುವ ಸಂಖ್ಯೆಯಿಂದ ಕೆಲವು ಕಹಿ ಪರಿಣಾಮಗಳಾಗಬಹುದು. ಪ್ರತಿಯೊಂದನ್ನೂ ಸರಕಾರವೇ ಮಾಡಬೇಕೆಂದಾಗ ಸರಕಾರೀ ನೌಕರರ ಪಾತ್ರವೇ ಪ್ರಾಮುಖ್ಯವಾಗಿ ಜನತೆ ಯೋಜನೆಗಳಿಂದ ದೂರವಾಗಿ ಉಳಿಯುವ ಅಪಾಯವೂ ಇದೆ. ಇದನ್ನು ನಿವಾರಿಸಬೇಕು. ಅಧಿಕಾರಿಗಳು ಯೋಜನಾ ಮನೋಭಾವವನ್ನು ತಾಳುವುದಲ್ಲದೆ ಜನತೆಯ ಸಹಕಾರವನ್ನು ಪಡೆಯಬೇಕು. ಇಂದಿನ ಸರಕಾರಗಳು ಸಾರ್ವಜನಿಕ ಸಹಾಯ–ಸಹಕಾರಗಳನ್ನು ಸಮಿತಿಗಳ ಮೂಲಕ ಕೆಳಕಂಡ ರೀತಿಯಲ್ಲಿ ಪಡೆಯಬಹುದಾಗಿದೆ. (೧) ಸಮಿತಿಗಳಿಂದ ತಜ್ಞ ಅಭಿಪ್ರಾಯವನ್ನು ಪಡೆಯಬಹುದು. (೨) ಇಲಾಖೆಯ ಮಟ್ಟದಲ್ಲಾಗಲಿ, ಸರಕಾರದ ಮಟ್ಟದಲ್ಲಾಗಲಿ ಸಲಹಾಸಮಿತಿ ಅಥವಾ ತನಿಖೆಯ ಸಮಿತಿಗಳನ್ನು ನೇಮಿಸಬಹುದು. ಈ ಮೂಲಕ ಜನರಿಂದ ಪ್ರಯೋಜನ ಪಡೆಯಬಹುದು. ಸಲಹಾಸಮಿತಿಗಳನ್ನು ನೇಮಕ ಮಾಡುವುದು ಬಹಳ ಜನಪ್ರಿಯವಾಗಿದೆ. ಅನೇಕ ವರ್ಗಗಳಿಗೆ ಇಲ್ಲಿ ಪ್ರಾತಿನಿಧ್ಯ ಕೊಡಬಹುದಾಗಿದೆ. (೩) ಸಂಧಾನ ಸಮಿತಿಗಳು ಕೈಗಾರಿಕೋದ್ಯಮ ರಂಗದಲ್ಲಿ ಹೆಚ್ಚು ಪ್ರಯೋಜನಕರವಾಗಬಹುದು. (೪) ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ ಕೂಡ ಸಮಿತಿಗಳ ಪಾತ್ರ ಉಪಯೋಗಕರವಾಗಿದೆ. ಆಡಳಿತದಲ್ಲಿ ಪ್ರಜೆಗಳು ಭಾಗವಹಿಸಿ ಸೇವೆ ಸಲ್ಲಿಸಿದರೆ ಮಾತ್ರ ಪ್ರಜಾಪ್ರಭುತ್ವವು ಸಾರ್ಥಕವಾಗುತ್ತದೆ.

ಕೊನೆಯದಾಗಿ ಒಂದು ವಿಚಾರವನ್ನು ನಾವು ಮರೆಯಬಾರದು. ಸಾರ್ವಜನಿಕ ಆಡಳಿತವು ತನ್ನಷ್ಟಕ್ಕೆ ತಾನು ಗುರಿ

ಯಾಗಲಾರದು. ಸಾಧನ ಮಾತ್ರ, ಅದು ಸರಕಾರಕ್ಕೆ ಲಾಭದಾಯಕ ವ್ಯಕ್ತಿಯೂ ಅಲ್ಲ; ಜನಸೇವೆ ಮಾಡಲು ಒಂದು ವಿಶಾಲ ಕ್ಷೇತ್ರ ಮಾತ್ರ. ಸಂಪ್ರದಾಯ ಶರಣರಾದ ಆಡಳಿತಾಧಿಕಾರಿಗಳು ಪ್ರತಿಗಾಮಿಗಳಾಗಿ ಹೊಸ ಧೋರಣೆಗಳನ್ನು ವಿರೋಧಿಸಬಹುದಾದರೂ ಕೆಲವು ಸಲ ಅವರೇ ಕ್ರಾಂತಿಯ ಪೋಷಕವಾಗಿ ವರ್ತಿಸಲೂ ಬಹುದು. ಒಟ್ಟಿನಲ್ಲಿ ಇಂದಿನ ಆಡಳಿತವು ಸಮಾಜದ ಮುನ್ನಡೆಗೆ ತುಂಬ ನೆರವಾಗಬಹುದಾಗಿದೆ ಎಂದು ಅಭಿಪ್ರಾಯಪಡುವುದರಲ್ಲಿ ಅಭ್ಯಂತರವಿಲ್ಲ.

---

...ಜನಿಕ ಅಭಿಪ್ರಾಯ(ದ್ವಿ.ಆ)–ಎನ್.ರಾಜಗೋಪಾಲರಾವ್

...ನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ
–ದೇವೇಂದ್ರಕುಮಾರ ಹಕಾರಿ

ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ (ದ್ವಿ. ಆ)
–ಜಿ. ಡಿ. ನಾಡಕರ್ಣಿ

...ಸ್ಕ್ಯಾಶನ್ನು ಗಳು (ದ್ವಿ. ಆ.) –ಕೆ. ಡಿ. ಶಂಗೋಡ

...ಹಾಕವಿ ರಾಘವಾಂಕನ ಪಾತ್ರಗಳಲ್ಲಿ
ತತ್ವನಿಷ್ಠೆ (ದ್ವಿ. ಆ.)- ಬಿ. ವ್ಹಿ. ಮಲ್ಲಾಪುರ

...ಯೋಜನೆಗಳಲ್ಲಿ ಸಹಕಾರದ ಪಾತ್ರ (ದ್ವಿ. ಆ.)
–ಎಸ್. ಜಿ. ಕರಭಂಟನಾಳ

...ನ್ನಡ ಜೈನ ಪುರಾಣಗಳು (ದ್ವಿ.ಆ.)–ಎಸ್. ಎನ್. ನಾಯಕ

೩೯ ಕನ್ನಡ ನಾಟ್ಯಸೃಷ್ಟಿ –ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು (ದ್ವಿ.ಆ.)–ಬಿ.ಬಿ.ಹೆಂಡಿ

೪೧ ನೀವು ಬಯಸುವ ಮಗು ಗಂಡೊ?
ಹೆಣ್ಣೊ? (ದ್ವಿ. ಆ.)-ಕೆ. ಆರ್. ರಾಮಸ್ವಾಮಿ

೪೨. ಅಂಡಯ್ಯ –ಬಿ. ಎಸ್. ಕುಲಕರ್ಣಿ

೪೩. ಬೆಳವಲನಾಡಿನ ಬೆಳೆಗಳು –ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು (ದ್ವಿ. ಆ.) –ಎಲ್. ಆರ್. ಹೆಗಡೆ

೪೫ ಸುಧಾರಿಸಿದ ಬೇಸಾಯ –ಎ. ಸಿ. ಕಲ್ಯಾಣಿಮಠ

೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು
–ಬಿ. ಆರ್. ಗೋಪಾಲ

೪೭. ಗ್ರಂಥಾಲಯದ ಅಂತರಂಗ –ಎಸ್. ಆರ್. ಗುಂಜಾಳ

೪೮. ಸ್ತ್ರೀ ಮತ್ತು ಶಿಕ್ಷಣ –ವನಮಾಲಾ ಆಚಾರ್

೪೯. ಜಾಗತಿಕ ಸರಕಾರ –ಸಿ. ವೀರಬಸಣ್ಣ

೫೦. ಸಮುದಾಯ ಸಂಘಟನೆ –ಎಚ್. ಎಂ. ಮರುಳಸಿದ್ಧಯ್ಯ

೫೧. ಅಶೋಕನ ಧರ್ಮಶಾಸನಗಳು –ಶ್ರೀನಿವಾಸ ರಿತ್ತಿ

೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಆ.)
–ಸಿ. ವ್ಹಿ. ರಂಗಸ್ವಾಮಿ

೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ
–ಎಸ್. ಎಸ್. ಕಬ್ಬಿನ

೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ
–ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು
–ಬಿ. ಸಿ. ಜವಳಿ

೫೬. ಭಾರತ ರಾಜ್ಯಘಟನೆ –ಎಂ. ಎಸ್. ಪಾಟೀಲ

೫೭. ಪಂಚಾಯತಿ ರಾಜ್ಯ –ಎಸ್. ಜಿ. ಕರಭಂಟನಾಳ
ಮತ್ತು ಕೆ. ಡಿ. ಬಸವ

೫೮. ವಿಷಮಜ್ವರ –ಪಿ. ಎಸ್. ಶಂಕರ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎ...

೬೦. ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ...

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ...

೬೨. ಹರಿಜನರ ಸಮಸ್ಯೆಗಳು ಹಾಗು ಅವುಗಳ ಪರಿಹಾರ
—ಎನ್. ಕೆ. ಕಡೆತೋಟ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪. ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

೬೫. ಹೃದಯಾಘಾತ — ಸಿ. ಎಸ್. ಶಂಕರ

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ —ಡಿ. ಎ. ಚಿಕ್ಕ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ
ಮೂರು ಪಾತ್ರಗಳು —ಎಂ. ಜಿ. ಬಿರಾದಾರ

೬೮. ಯೋಜನೆಗಳೇಕೆ ಬೇಕು ? —ಎಸ್. ಎಸ್. ಯಮ್ಮಿ

೬೯. ನಗರನಾಡಿನ ಶಿವಶರಣರು —ವ್ಹಿ. ಶಿವಾನಂದ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮಠ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡದ

೭೨. ಬಸವಣ್ಣನವರನ್ನು ಕುರಿತ ಶಾಸನಗಳು—ಎಂ. ಎಂ. ಕಲಬುರ್ಗಿ

೭೩. ಆಧುನಿಕ ಭಾಷಾ ವಿಜಾ —ಜಿ. ಎಸ್. ಕುಳ್ಳಿ

೭೪. ಪುರಾಣ ಜಿಜ್ಞಾಸೆ — ಎಲ್. ಆರ್. ಹೆಗಡೆ

೭೫. ಭಾರತದಲ್ಲಿ ಶೈಕ್ಷಣಿಕ ಪ್ರಯೋಗ —ವ್ಹಿ. ಎಸ್. ಕುಲಕರ್ಣಿ

೭೬. ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು
—ಎ. ಸಿ. ಕಲ್ಯಾಣಮಠ

೭೭. ಕನ್ನಡ ನುಡಿಯ ಬೆಳವಣಿಗೆ —ಎಚ್. ಜಿ. ಲೋಕೂರ

೭೮. ಹರಿಹರನ ಗಿರಿಜಾಕಲ್ಯಾಣ —ಬಿ. ವ್ಹಿ. ಶಿರೂರ

೭೯. ಹೊಟ್ಟೆಯ ಹುಣ್ಣು —ಸಿ. ಎಸ್. ಶಂಕರ

೮೦. ಸಂಯೋಜಕ ಶಕ್ತಿ —ಬಿ. ಜಿ. ಜ್ಯೋತಿ

೮೧. ಸಂಸದೀಯ ಸರಕಾರ ಭಾರತಕ್ಕೆ ಒಪ್ಪುವದೇ ?
—ವಸಂತ ಪಾಟೀಲ

೮೨. ನಮ್ಮ ರೈತರೇಕೆ ಹಿಂದುಳಿದಿದ್ದಾರೆ ? —ಎಂ. ಸಿ. ಕೊಡ್ಲಿ

೮೩. ನಗೆಗಾರ ನಯಸೇನ —ಎಂ. ಎಸ್. ಸುಂಕಾಪುರ

೮೪. ಶೂನ್ಯ ಸಂಪಾದನೆ —ವ್ಹಿ. ಎಸ್. ಕರಂಬಿ

೮೫. ಮಹಮೂದ ಗವಾನ —ಎಲ್. ಆರ್. ಕುಲಕರ್ಣಿ

೮೬. ಕೆಳದಿಯ ನಾಯಕರು —ಜಿ. ಎಸ್. ದೀಕ್ಷಿತ

೮೭. ಮುಳುಗುಂದ ನಾಡು —ಎಸ್. ಎಚ್. ರಿತ್ತಿ

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ